# ಮುಂಬಯಿ ಪ್ರಾಂತದ

# ಹೊಲ-ಸಾಗುವಳಿ (ಟೆನನ್ಸಿ) ಕಾಯದೆ

# Bombay Tenancy Act 1939

(as amended by Bombay Act XXVI of 1946)



ಸಂಪಾದಕ:

**ವೆಂಕಟೇಶ ಭೀಮರಾವ ನಾಯಕ**

ಎಂ. ಏ., ಎಲ್‌ಎಲ್. ಬಿ.

ತಿದ್ದಿದ ಎರಡನೇ ಆವೃತ್ತಿ



**ಬೆಲೆ : ಒಂದು ರೂಪಾಯಿ ಮಾತ್ರ**

# ಮುಂಬಯಿ ಪ್ರಾಂತದ ಹೊಲ-ಸಾಗುವಳಿ (ಟೆನನ್ಸಿ) ಕಾಯದೆ

## Bombay Tenancy Act 1939

( as amended by Bombay Act XXVI of 1946 )



ಸಂಪಾದಕ:

**ವೆಂಕಟೇಶ ಭೀಮರಾವ ನಾಯಕ**

ಎಂ. ಏ.. ಎಲ್‌ಎಲ್. ಬಿ.

ತಿದ್ದಿದ ಎರಡನೇ ಆವೃತ್ತಿ



**ಬೆಲೆ : ಒಂದು ರೂಪಾಯಿ ಮಾತ್ರ**

# ಮುಂಬಯಿ ಪ್ರಾಂತದ

# ಹೊಲ-ಸಾಗುವಳಿ ಕಾಯದೆ

[ ೧೯೪೬ನೇ ಇಸವಿಯ (ತಿದ್ದುಪಡೆ) ಕಾಯಿದೆ ಸಹಿತ ]

## (Bombay Tenancy Act 1939)

(as amended by Bombay Act XXVI of 1946)

**ಪೀಠಿಕೆ**

ಮುಂಬಯಿ ಪ್ರಾಂತದಲ್ಲಿಯ ಒಕ್ಕಲತನದ ಭೂಮಿಗಳ ರೈತರ ಸಂರಕ್ಷಣೆಗೋಸುಗ ಮತ್ತು ಇತರ ಉದ್ದೇಶಗಳ ಸಲುವಾಗಿ ಏರ್ಪಾಡು ಮಾಡುವದು ಸಮಯೋಚಿತವಾಗಿರುವದರಿಂದ ಕೆಳಗೆ ಬರೆದ ಪ್ರಕಾರ ಕಾಯದೆಯು ಮಾಡಲ್ಪಡುತ್ತದೆ:—

**ಪೀಠಿಕೆಯ ವಿವರಣೆ**

ಯಾವದೊಂದು ಕಾಯದೆಯನ್ನು ಮಾಡುವಾಗ ಸಾಮಾನ್ಯವಾಗಿ ಆ ಕಾಯದೆಯನ್ನು ಮಾಡುವ ಕಾರಣ ಮತ್ತು ಅದರ ಉದ್ದೇಶ ವ್ಯಾಪ್ತಿ ಮೊದಲಾದವುಗಳನ್ನು ಕುರಿತು ಆರಂಭದಲ್ಲಿ ನಿರ್ದೇಶ ಮಾಡುವದು ವಾಡಿಕೆ. ಇದಕ್ಕೆ ಶಾಸನ ಶಾಸ್ತ್ರದಲ್ಲಿ ಪೀಠಿಕೆ (Pre-amble) ಎಂದು ಹೆಸರು. ಕಾಯದೆಯಲ್ಲಿ ಮುಂದೆ ಹೇಳತಕ್ಕ ವಿಷಯಗಳನ್ನೆಲ್ಲ ಈ ಪೀಠಿಕೆಯ ಅರ್ಥವ್ಯಾಪ್ತಿಯನ್ನು ಅನುಲಕ್ಷಿಸಿ ಅರ್ಥ ಮಾಡಬೇಕಾಗುತ್ತದೆ. ಆದ್ದರಿಂದ ಪೀಠಿಕೆಯು ಒಂದು ರೀತಿಯಿಂದ ಮುಂದೆ ವಿವರಿಸಲ್ಪಡುವ ಕಲಮುಗಳ ಅರ್ಥ ನಿರ್ಣಯಕ್ಕೆ ಕೈ-ದೀವಿಗೆಯಂತಿರುವದೆಂದು ಹೇಳಬಹುದು. ಈ ದೃಷ್ಟಿಯಿಂದ ಪೀಠಿಕೆಯ ಪದ ಪಂಕ್ತಿಗಳ ಪರಿಚಯವು ಕಾಯದೆಯ ಅಭ್ಯಾಸವನ್ನು ಮಾಡುವವರಿಗೆ ಅಗತ್ಯವಾಗಿರುತ್ತದೆ.

ಪ್ರಸ್ತುತ ಕಾಯದೆಯ ಪೀಠಿಕೆಯನ್ನು ಈ ರೀತಿಯಿಂದ ಪರಿಶೀಲಿಸಿದರೆ ಮುಂಬಯಿ ಪ್ರಾಂತದಲ್ಲಿಯ ಒಕ್ಕಲತನದ ಭೂಮಿಗಳ ರೈತರ

ಸಂರಕ್ಷಣೆ ಮಾಡುವದು ಮತ್ತು ಇತರ ಉದ್ದೇಶಗಳ ಸಲುವಾಗಿ ಕಾಯದೆಯಿಂದ ವ್ಯವಸ್ಥೆ ಮಾಡುವದು ಸಮಯೋಚಿತವೂ ಇಷ್ಟವೂ ಆಗಿದೆ ಯೆಂಬ ಮಾತನ್ನು ಕಾಯದೆಯನ್ನು ಮಾಡುವ ಸರಕಾರವು ಒಪ್ಪಿಕೊಂಡ ಸಂಗತಿಯು ಚೆನ್ನಾಗಿ ವ್ಯಕ್ತವಾಗುತ್ತದೆ. ಹೊಲದೊಡೆಯರ ಹಾಗೂ ರೈತರ ಪರಸ್ಪರ ಸಂಬಂಧವನ್ನು ಕಾಯದೆಯಿಂದ ಗೊತ್ತುಪಡಿಸಿ ಅವರವರ ಹಕ್ಕು-ಹೊಣೆಗಳೇನೆಂಬುದನ್ನು ತಿಳಿಸಿ ಕೊಟ್ಟು ರೈತರಿಗೆ ಒಡೆಯರಿಂದಾಗುತ್ತಿರುವ ಅನ್ಯಾಯಗಳಿಂದ ಸಂರಕ್ಷಣೆಯನ್ನು ಒದಗಿಸುವದೇ ಈ ಕಾಯದೆಯ ಮುಖ್ಯ ಉದ್ದೇಶವಾಗಿದೆ.

## ಉದ್ದೇಶ-ಕಾರಣಗಳ ವಿಧಾನ ಪತ್ರಿಕೆ

ಹೊಸದೊಂದು ಕಾಯದೆಯನ್ನು ಮಾಡುವಾಗ ಅಥವಾ ಹಳೆಯ ಕಾಯದೆಯಲ್ಲಿ ಏನಾದರೂ ತಿದ್ದುಪಡೆ ಮಾಡುವಾಗ ಅವುಗಳ ಉದ್ದೇಶ ಮತ್ತು ಕಾರಣಗಳನ್ನು ಕುರಿತು ಶಾಸನ ಕರ್ತರು (ಕಾಯದೆಯನ್ನು ಮಾಡುವವರು) ಕೆಲವು ಮಾತುಗಳನ್ನು ಹೇಳುವರು. ಅದಕ್ಕೆ ಉದ್ದೇಶ ವಿಧಾನ ಪತ್ರಿಕೆಯೆಂದು ಹೆಸರು. ಹೊಲ ಸಾಗುವಳಿ ಕಾಯದೆಯನ್ನು ಕುರಿತು ಮುಂಬಯಿ ಸರಕಾರದ ಸೂತ್ರಗಳನ್ನು ವಹಿಸಿದ್ದ ಕಾಂಗ್ರೆಸ ಮಂತ್ರಿ ಮಂಡಲದಲ್ಲಿ ಕಂದಾಯ ಮಂತ್ರಿಗಳಾದ ಶ್ರೀ. ಮುರಾರಜಿ ದೇಸಾಯಿಯವರು ಈ ಬಗೆಯ ಪತ್ರಿಕೆಯಲ್ಲಿ ಹೀಗೆ ಹೇಳಿರುವರು.

“ಮುಂಬಯಿ ಪ್ರಾಂತದಲ್ಲಿಯ ರೈತರ ಹಾಗೂ ಒಡೆಯರ ಸಂಬಂಧದ ಬಗ್ಗೆ ೧೮೭೯ ನೇ ಇಸವಿಯ ಮುಂಬಯಿ ಭೂಕಂದಾಯ ಶಾಸನ ಮತ್ತು ಖೋತಿ ಸೆಟ್ಲಮೆಂಟ ಕಾಯದೆಯ ಕಲಮುಗಳಲ್ಲಿ ವ್ಯವಸ್ಥೆಯಿದೆ. ಆದರೆ ಈ ಏರ್ಪಾಡು ಅನೇಕ ವಿಷಯಗಳಲ್ಲಿ ಅಸಮಾಧಾನ ಕರವಿರುತ್ತದೆಯೆಂದು ಕಂಡು ಬಂದಿದೆ. ಎಷ್ಟೋ ರೈತರು ವಂಶ ಪರಂಪರೆಯಾಗಿ ಹೊಲಗಳನ್ನು ಹಿಡಿದು ಸಾಗಮಾಡುತ್ತ ಬಂದಿದ್ದರೂ ಅವರಿಗೆ ನಿರಂತರ ಸ್ವರೂಪದ ಹಕ್ಕುಗಳಾವುವೂ ದೊರೆತಿಲ್ಲ; ಮತ್ತು ಅವರನ್ನು ಹೊಲದೊಡೆಯರು ತಮ್ಮ ಮನಸ್ಸಿಗೆ ಬಂದಾಗ ಬಿಡಿಸಬಹುದು. ಕಾಯಂ ರೈತರ ಮೇಲೆಯೂ ಸಹ ಸ್ಥಾನಿಕ ಸಂಪ್ರದಾಯ, ರೂಢಿಗಳ ಪ್ರಕಾರ ಕೆಲವು ಸುಂಕಗಳ ಹೊರೆಯನ್ನು ಹೊರಿಸಲಾಗುತ್ತಿದೆಯಲ್ಲದೆ ಬಿಟ್ಟಿ ಅಥವಾ ಬಲುಮೆಯ ಊಳಿಗತನವನ್ನು ಅವರ ಕಡೆಯಿಂದ ತೆಗೆದು ಕೊಳ್ಳಲಾಗುತ್ತದೆ. ಹೀಗಾಗಿ ರೈತನಿಗೆ ಭೂಮಿಯನ್ನು ಸುಧಾರಿಸಬೇಕೆಂಬ

ಪ್ರೇರಣೆಯೇ ಆಗುವದಿಲ್ಲ. ಮತ್ತು ಇದು ಮೀರಿ ರೈತರು ಹೊಲವನ್ನು ಸುಧಾರಿಸಿದರೆ ಅವರಿಗೆ ಹೆಚ್ಚಿನ ಲಾವಣಿಯನ್ನು ಕೊಡಬೇಕಾಗುತ್ತದೆ. ಇಲ್ಲವೆ ಆ ಸುಧಾರಣೆಯನ್ನು ಮಾಡಿದ ಮೂಲಕ ಇತರರು ಏರು ಲಾವಣಿಯನ್ನು ಹಿಡಿಯಲು ಮುಂದೆ ಬರುವದರಿಂದ ತಾನು ಹಿಡಿದು ಸುಧಾರಿಸಿದ ಹೊಲವನ್ನು ಬಿಟ್ಟು ಬಿಡಬೇಕಾಗುತ್ತದೆ. ಖಾಲಸಾವಲ್ಲಿಯ ಅಥವಾ ಇನಾಮು ಗ್ರಾಮಗಳಲ್ಲಿಯ ದೊಡ್ಡ ದೊಡ್ಡ ಜಮೀನದಾರರ ರೈತರು ಮತ್ತು ಇಡೀ ಊರಿನ ಅಧಿಕಾರವುಳ್ಳ ಇನಾಮುದಾರರ ರೈತರು ಜಮೀನದಾರರ ಹಾಗೂ ಇನಾಮುದಾರರ ಘನತೆ, ಅಧಿಕಾರ, ಎಲ್ಲ ಸಾಗುವಳಿಯಾಗುವ ಭೂಮಿಯ ಒಡೆತನ, ಮನೆ ಮಾರು. ಹುಲ್ಲುಗಾವಲು ಮೊದಲಾದವುಗಳ ಮೇಲೆ ಇರುವ ಅವರ ನಿಯಂತ್ರಣ ಹಾಗೂ ಪ್ರಭುತ್ವಗಳ ಮೂಲಕ ವಿಶೇಷವಾಗಿ ಇಂಥ ಅನನುಕೂಲತೆಗಳಿಗೆ ಆಹುತಿಯಾಗಬೇಕಾಗುತ್ತದೆ. ಆದ್ದರಿಂದ ಈ ಕಾಯಿದೆಯು ಅಂಥ ಜಮೀನದಾರರ ರೈತರಿಗೆ ವಿಶೇಷ ಸಂರಕ್ಷಣೆಯನ್ನು ಕೊಡುತ್ತದೆ.

ಹೊಲದೊಡೆಯರ ನ್ಯಾಯವಾದ ಹಕ್ಕುಗಳನ್ನು ಈ ಕಾಯಿದೆಯು ಕಾಯುತ್ತದೆ. ಸಮಂಜಸವಾದ ಲಾವಣಿಯನ್ನು ರೈತನು ಕೊಡದಿದ್ದ ಪಕ್ಷದಲ್ಲಿ ಮತ್ತು ಇತರ ಕೆಲವು ಪ್ರಸಂಗಗಳಲ್ಲಿ ತಮ್ಮ ಹೊಲವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುವ ವ್ಯವಸ್ಥೆಯಾದರೂ ಈ ಕಾಯಿದೆಯಲ್ಲಿ ಉಂಟು.

ದುಷ್ಕಾಳದಲ್ಲಿ ಎಲ್ಲ ವರ್ಗದ ರೈತರಿಗೂ ಸಾಕಷ್ಟು ಪರಿಹಾರವು ಸಿಗುವಂತೆ ಹಾಗೂ ಅವರನ್ನು ಬಿಟ್ಟಿ, ಬೇಗಾರಿ, ಮೊದಲಾದ ಎಲ್ಲ ಬಗೆಯ ಸುಂಕಗಳ ಹೊರೆಯಿಂದ ಮುಕ್ತಮಾಡುವಂತೆ ಈ ಕಾಯದೆಯಲ್ಲಿ ವ್ಯವಸ್ಥೆಯನ್ನು ಮಾಡಿದೆ.

## ಉದ್ದೇಶ ಪತ್ರಿಕೆಯ ವಿಮರ್ಶೆ

ಮೇಲಿನ ಉದ್ದೇಶ ಪತ್ರಿಕೆಯನ್ನು ಸೂಕ್ಷ್ಮ ರೀತಿಯಿಂದ ವಿಮರ್ಶಿಸಿದರೆ ಕೆಲವು ವಿಚಾರಣೀಯ ಅಂಶಗಳು ಹೊರಹೊಮ್ಮುತ್ತವೆ. ಹೊಲದೊಡೆಯರ ಹಾಗೂ ರೈತರ ಪರಸ್ಪರ ಸಂಬಂಧವನ್ನು ಗೊತ್ತುಪಡಿಸುವದು ಸರಕಾರದ ಕರ್ತವ್ಯವೆಂಬ ಮಾತಿನ ಬಗ್ಗೆ ಇಮ್ಮತವಿರಲು ಶಕ್ಯವಿಲ್ಲ. ಯಾಕಂದರೆ ಒಕ್ಕಲತನವೆಂದರೆ ರಾಷ್ಟ್ರದ ಸಂಪತ್ತು. ಈ ರಾಷ್ಟ್ರದ ಸಂಪತ್ತು ಬೆಳೆಯಬೇಕಾದರೆ ರೈತರ ಹಾಗೂ ಒಡೆಯರ ಸಂಬಂಧವು ಅನುರಾಗ ಪೂರ್ಣವಾಗಬೇಕು. ಈ ಉದ್ದೇಶವು ಸಾಧಿಸಬೇಕಾದರೆ

ಅವರವರ ಹಕ್ಕು-ಹೊಣೆಗಾರಿಕೆಗಳ ಪೂರ್ಣ ಜ್ಞಾನವು ಇಬ್ಬರಿಗೂ ಅಗತ್ಯ; ಇನ್ನೊಂದು ದೃಷ್ಟಿಯಿಂದ ಕೂಡ ಈ ತರದ ಸಂಬಂಧವನ್ನು ನಿರ್ಣಯಿಸುವ ಕಾಯದೆಯ ಅವಶ್ಯಕತೆಯನ್ನು ಸಮರ್ಥಿಸಬಹುದು. ಅದೇನಂದರೆ, ಭೂಮಿಯ ಒಡೆತನವು ರಾಷ್ಟ್ರದ್ದು; ಮತ್ತು ಆ ಒಡೆತನವನ್ನು ವ್ಯಕ್ತಿಗಳಿಗೆ ರಾಷ್ಟ್ರವು ಒಪ್ಪಿಸಿಕೊಡುತ್ತದ. ಹೀಗೆ ಒಪ್ಪಿಸಿ ಕೊಟ್ಟ ಒಡೆತನದ ಉಪಯೋಗ-ಉಪಭೋಗಗಳನ್ನು ಆಯಾಯ ವ್ಯಕ್ತಿಗಳು ಯೋಗ್ಯ ರೀತಿಯಿಂದ ಮಾಡುತ್ತಿರುವರೋ ಇಲ್ಲವೋ ಎಂಬುದನ್ನು ನೋಡುವ ಅಧಿಕಾರವು ರಾಷ್ಟ್ರಕ್ಕೆ ಇರುತ್ತದೆ.

ಇನ್ನು ಉದ್ದೇಶ ಪತ್ರಿಕೆಯಲ್ಲಿ ಹೇಳಿದ ಒಂದು ಮಾತು ಚರ್ಚಾಸ್ಪದವಾಗಿದೆ. ವಂಶಪರಂಪರೆಯಾಗಿ ಒಂದು ಹೊಲವನ್ನು ರೈತನು ಮಾಡುತ್ತ ಬಂದರೂ ಆತನಿಗೆ ನಿರಂತರ ರೈತತನದ ಹಕ್ಕುಗಳು ಪ್ರಾಪ್ತವಾಗಿಲ್ಲವಾದ ಮೂಲಕ ಹೊಲಗಳ ಸುಧಾರಣೆಗೆ ಈ ಸಂಗತಿಯು ಆತಂಕಪ್ರಾಯವಾಗಿದೆಯೆಂದು ಹೇಳಲ್ಪಟ್ಟಿದೆ. ಈ ವಿಧಾನವು ತುಸು ಒಂದೇ ಪಕ್ಷದ ಕಡೆಗೆ ಹೆಚ್ಚು ಒಲಿಯುತ್ತಿರುವದೆಂದು ಹೇಳಬಹುದು. ವಂಶಪರಂಪರೆಯಾಗಿ ಹೊಲವನ್ನು ಮಾಡುತ್ತ ಬಂದ ರೈತವರ್ಗವು ನಮ್ಮ ಪ್ರಾಂತದಲ್ಲಿ ಇರುವದೆಂದು ಕಾಯದೆಯನ್ನು ಮಾಡುವವರೇ ಒಪ್ಪಿಕೊಳ್ಳುತ್ತಿರುವರು. ಒಂದು ಸಮಯ, ರೈತರ ಹಾಗೂ ಒಡೆಯರ ಸಂಬಂಧವು ಅಹಿತಕರವಾಗಿದ್ದರೆ ಈ ಪ್ರಕಾರ ವಂಶಪರಂಪರ ಸಾಗುವಳಿಯನ್ನು ಹೇಗೆ ಮಾಡುತ್ತಿದ್ದರು? ಎಂಬ ಪ್ರಶ್ನೆಯು ಹುಟ್ಟುತ್ತದೆ ರೈತರು ಮತ್ತು ಒಡೆಯರು ಪರಸ್ಪರ ವಿಶ್ವಾಸದಿಂದ ನಡೆದುಕೊಂಡ ಮೂಲಕವೇ ಈ ರೀತಿ ವಂಶಪರಂಪರೆಯಾಗಿ ಸಾಗುವಳಿದಾರತನವು ನಡೆದು ಬಂದಿರಬೇಕೆಂಬುದು ಸ್ಪಷ್ಟವಾಗುತ್ತದೆ. ಈ ಪ್ರಕಾರ ವಿಶ್ವಾಸದ ಸಂಬಂಧನನ್ನಿಟ್ಟುಕೊಂಡು ಬಂದವರ ಪ್ರಮಾಣವು ಹೆಚ್ಚೋ ಅಥವಾ ಹೊಲದ ಸುಧಾರಣೆಯನ್ನು ಮಾಡಿದ ಬಳಿಕ ವಿಶ್ವಾಸ-ಘಾತ ಮಾಡಿ ಆತನನ್ನು ಬಿಡಿಸಿ ಬೇರೊಬ್ಬರಿಗೆ ಹೊಲವನ್ನು ಸಾಗುಮಾಡಿದ ಒಡೆಯರ ಪ್ರಮಾಣವು ಹೆಚ್ಚೋ ಎಂಬುದರ ತುಲನೆ ಮಾಡುವದು ಅಗತ್ಯವಾಗಿತ್ತು. ಆದರೆ ಹಾಗೆ ಮಾಡದೆ ನಿರಂತರ ರೈತತನದ ಹಕ್ಕು ದೊರಕದೆ ಹೋದುದರಿಂದ ಹೊಲದ ಸುಧಾರಣೆಗೆ ರೈತರಲ್ಲಿ ಹುರುಪು ಬರಲಿಲ್ಲೆಂಬ ಸಿದ್ಧಾಂತವನ್ನು ಗೃಹೀತಮಾಡಿಕೊಂಡು ಕಾಯದೆಯು ಮುಂದಿನ ಎಲ್ಲ ವ್ಯವಸ್ಥೆಯಾದಂತೆ ತೋರುತ್ತದೆ. ಹೊಲದ ಸುಧಾರಣೆಯಾಗದಿರುವದಕ್ಕೆ

ರೈತತನದ ನಿರಂತರ ಹಕ್ಕು ಪ್ರಾಪ್ತವಾಗದಿದ್ದುದು ಇತರ ಅನೇಕ ಕಾರಣಗಳಲ್ಲಿ ಒಂದಾಗಿರಬಹುದು. ಇದೊಂದೇ ಒಕ್ಕಲತನದ ನಷ್ಟಕ್ಕೆ ಕಾರಣವೆಂದು ತಿಳಿಯುವದು ಯೋಗ್ಯವಾಗಲಾರದು. ನಮ್ಮ ದೇಶದ ಪಾರತಂತ್ರ್ಯ, ವಾಣಿಜ್ಯ ವ್ಯವಹಾರದಲ್ಲಿಯ ದಾಸ್ಯ, ಕೃತ್ರಿಮ ವಿನಿಮಯ ದರ, ಬಡತನ ಮತ್ತು ನೈಸರ್ಗಿಕ ಆಪತ್ತುಗಳು, ಒಕ್ಕಲಿಗರಲ್ಲಿಯ ಸೋಮಾರಿತನ ಅಜ್ಞಾನ ಮೊದಲಾದವುಗಳ ಮೂಲಕ ಹೊಲಗಳ ಸುಧಾರಣೆಯಾಗಲು ಆತಂಕವುಂಟಾಗಿದೆಯೆಂದು ಅಂಕಿಸಂಖ್ಯೆಗಳಿಂದ ಸಿದ್ಧಮಾಡಬಹುದು.

ಈ ಕಾಯದೆಯ ವ್ಯವಸ್ಥೆಯಿಂದ ರೈತನಿಗೆ ನಿರಂತರ ರೈತತನದ ಹಕ್ಕು ದೊರೆತರೆ ಸುಧಾರಣೆಯಾಗುವದೆಂಬುದಕ್ಕೆ ಏನು ಆಧಾರವಿದೆ? ಮತ್ತು ಅದರ ಬಗ್ಗೆ ಆಶ್ವಾಸನವೇನು? ನಿರಂತರ ರೈತತನದ ಹಕ್ಕು ತನಗಿಲ್ಲೆಂದು ತಿಳಿದು ಸುಧಾರಣೆಯನ್ನು ಮಾಡದಿದ್ದವನು ಹೇಗಾದರೂ ತನಗೇ ನಿರಂತರ ಹಕ್ಕು ದೊರೆತಿದೆಯೆಂದು ತಿಳಿದು ಹೆಚ್ಚು ಅಲಸಿಗನಾದರೆ ಹೊಲದ ಸುದಾರಣೆಯಾಗುವ ಬಗೆ ಹೇಗೆ? ಒಕ್ಕಲಿಗನಂತೂ ಹೇಳಿ ಕೇಳಿ ಬಡವ. ಅವನ ಹತ್ತರ ಬಂಡವಲವಿಲ್ಲ. ಒಡೆಯನಂತೂ ಇನ್ನು ಮುಂದೆ ಬಂಡವಲವನ್ನು ಒದಗಿಸುವದಿಲ್ಲ. ಮತ್ತು ಈ ಕಾಯದೆಯಲ್ಲಿ ಸಾವುಕಾರ ಅಥವಾ ಒಡೆಯನ ಹೊರತು ಬೇರೆ ಕಡೆಯಿಂದ ರೈತನಿಗೆ ಬಂಡವಲವನ್ನು ಒದಗಿಸುವ ವ್ಯವಸ್ಥೆಯಿಲ್ಲ. ಇದ್ದಕ್ಕಿದ್ದಂತೆ ಹೊಲದ ಸ್ಥಿತಿಯನ್ನು ಕಾಯ್ದರೆ ತೀರಿತು ಅವನ ಹೊಣೆಗಾರಿಕೆ. ಹೊಲವನ್ನು ಕೆಡಿಸಿದರೆ ಮಾತ್ರ ಆತನ ರೈತತನದ ಹಕ್ಕು ನಷ್ಟವಾಗುವದು. ಆಗ ಕೂಡ ಒಡೆಯನು ನೋಟೀಸು ಕೊಟ್ಟು ಹೊಲಕ್ಕಾದ ಕೇಡನ್ನು ತೋರಿಸಿ ಅದನ್ನು ಸರಿಪಡಿಸಲು ಒಂದು ವರ್ಷದ ಅವಧಿಯನ್ನು ಕೊಡಬೇಕು. ಮತ್ತು ಆ ಅವಧಿಯಲ್ಲಿ ರೈತನು ಹೊಲಕ್ಕಾದ ಕೇಡನ್ನು ಸರಿಪಡಿಸಿದರೆ ಅವನ ಹಕ್ಕು ನಷ್ಟವಾಗುವದಿಲ್ಲ. ಪ್ರತಿಯೊಂದು ಸಣ್ಣ ಮಾತಿಗೂ ರೈತನೂ ಒಡೆಯನೂ ಮಾಮಲೇದಾರರ ಕಡೆಗೆ ಓಡಾಡಬೇಕಾಗುವದು ಈ ಕಾಯದೆಯ ಒಂದು ದೋಷ.

**ಕಾಯದೆಯ ವ್ಯಾಪ್ತಿ**

ಈ ಕಾಯದೆಯ ವ್ಯಾಪ್ತಿಯು ಮರ್ಯಾದಿತವಿದ್ದು ಕೇವಲ ಒಕ್ಕಲ-ತನದ ಭೂಮಿಗಳ ರೈತರಿಗೆ ಮಾತ್ರ ಇದು ಹತ್ತುತ್ತದೆ. ಮತ್ತು ಈ ಕಾಯದೆಯು ಮುಂಬಯಿ ನಗರವನ್ನು ಬಿಟ್ಟು ಉಳಿದ ಇಡೀ ಪ್ರಾಂತಕ್ಕೆ ಅನ್ವಯಿಸುತ್ತದೆ.

## ನಾಲ್ಕು ಪ್ರಕರಣಗಳು

ಈ ಕಾಯದೆಯಲ್ಲಿ ಒಟ್ಟು ನಾಲ್ಕು ಪ್ರಕರಣಗಳಿದ್ದು ಅವುಗಳಲ್ಲಿ ಮೊದಲನೇ ಪ್ರಕರಣದಲ್ಲಿ ಕಾಯದೆಯಲ್ಲಿ ಉಪಯೋಗಿಸಿದ ಕೆಲವು ಪಾರಿ-ಭಾಷಿಕ ಶಬ್ದಗಳ ವ್ಯಾಖ್ಯೆ ಲಕ್ಷಣ ಮೊದಲಾದವುಗಳನ್ನು ಹೇಳಿದೆ. ಎರಡನೇ ಪ್ರಕರಣದಲ್ಲಿ "ಸಂರಕ್ಷಿತ ರೈತರು" ಎಂದರೆ ಯಾರು? ಅವರ ಅಧಿಕಾರ-ಕರ್ತವ್ಯಗಳು, ಹಕ್ಕು ಹೊಣೆಗಳು ಯಾವವು? ಮತ್ತು ಸಂರಕ್ಷಿತ ರೈತತನವನ್ನು ಕೊನೆಗಾಣಿಸಲು ಹೊಲದೊಡೆಯರಿಗೆ ಹಕ್ಕು ಯಾವಾಗ ಉಂಟಾಗುವದು? ಮೊದಲಾದ ವಿಷಯಗಳಿರುವವಲ್ಲದೆ ಸಂರಕ್ಷಿತ ರೈತನು ತನ್ನ ಖರ್ಚಿನಿಂದ ಮಾಡಿದ ಹೊಲದ ಸುಧಾರಣೆಯ ವಿಷಯವಾಗಿ ಯಾವ ಪರಿಹಾರಕ್ಕೆ ಬಾಧ್ಯಸ್ಥನಾಗುವನು? ಎಂಬುವರ ಬಗ್ಗೆಯಾದರೂ ಉಲ್ಲೇಖವಿರುತ್ತದೆ. ಮತ್ತು ಸಮಂಜಸ ಲಾವಣಿಯೆಂದರೇನು? ಅದನ್ನು ನಿರ್ಣಯಿಸುವವರಾರು? ಮತ್ತು ಅದನ್ನು ಯಾವಾಗ ನಿರ್ಣಯಿಸುವ ಪ್ರಸಂಗವು ಬರುವದು? ಇವೇ ಮೊದಲಾದ ಆನುಷಂಗಿಕ ವಿಷಯಗಳ ವ್ಯವಸ್ಥೆ ಯಾವರೂ ಈ ಪ್ರಕರಣದಲ್ಲಿದೆ. ಮೂರನೇ ಪ್ರಕರಣದಲ್ಲಿ ಸಾಮಾನ್ಯ ಸ್ವರೂಪದ ರೈತರ ಹಕ್ಕುಗಳನ್ನು ಕುರಿತು ಯೋಜನೆ ಮಾಡಿದೆ. ಸೂಟ-ತಹಕೂಪಗಳ ವಿಚಾರ, ಲಾವಣಿಯ ಪರಮಾವಧಿ ಪ್ರಮಾಣವನ್ನು ಗೊತ್ತುಪಡಿಸುವ ಸರಕಾರದ ಅಧಿಕಾರ ಮೊದಲಾದ ವಿಷಯಗಳ ನಿರ್ದೇಶವು ಈ ಪ್ರಕರಣದಲ್ಲಿದೆ. ನಾಲ್ಕನೇ ಪ್ರಕರಣದಲ್ಲಿ ಸಂಕೀರ್ಣ ಪ್ರಶ್ನೆಗಳ ಸಮಾ-ಲೋಚನೆಯಿದೆ. ಈ ಕಾಯದೆಯಲ್ಲಿ ಒಟ್ಟು ೩೧ ಕಲಮುಗಳಿದ್ದು ಅನೇಕ ಉಪಕಲಮುಗಳಿರುತ್ತವೆ.

# ಮುಂಬಯಿ ಪ್ರಾಂತದ
# ಹೊಲ ಸಾಗುವಳಿ (ಟೆನನ್ಸಿ) ಕಾಯದೆ

[೧೯೪೬ನೇ ಇಸವಿಯ (ತಿದ್ದುಪಡೆ) ಕಾಯದೆ ಸಹಿತ]

೧೯೩೫ನೇ ಇಸವಿಯ ಹಿಂದುಸ್ತಾನ ಸರಕಾರ ಕಾಯದೆಯ ೯೩ನೇ ಕಲಮಿನ ೪ನೇ ಉಪಕಲಮಿನಲ್ಲಿಯ ಅಂಶಗಳ ಪ್ರಕಾರ ೧೯೪೧ನೇ ಇಸವಿಯ ಮುಂಬಯಿ ಹೊಲ ಸಾಗುವಳಿ (ತಿದ್ದುಪಡೆ) ಕಾಯದೆಯನ್ನು ಪುನರ್ವ್ಯವಸ್ಥಿತಗೊಳಿಸುವದುಚಿತವೆಂದೆನಿಸಿದುದರಿಂದ; ಮತ್ತು ಮುಂದೆ ನಿರ್ದಿಷ್ಟಪಡಿಸುವ ಉದ್ದೇಶಗಳಿಗಾಗಿ ೧೯೩೯ನೇ ಇಸವಿಯ ಹೊಲಸಾಗುವಳಿಕಾಯದೆಯನ್ನು ತಿದ್ದುಪಡೆಗೊಳಿಸುವದುಚಿತವೆನಿಸಿರುವದರಿಂದ ಈ ಪ್ರಕಾರ ಕಾಯದೆಯನ್ನು ಮಾಡಲಾಗುತ್ತಿದೆ.

## ೧ನೇ ಪ್ರಕರಣ

### ಪ್ರಾಸ್ತಾವಿಕ

**೧. ಕಿರಿಹೆಸರು, ವ್ಯಾಪ್ತಿ ಮತ್ತು ಆರಂಭ**

1. ಈ ಕಾಯದೆಯು ೧೯೪೬ನೇ ಇಸವಿಯ ಮುಂಬಯಿ ಹೊಲ ಸಾಗುವಳಿ (ತಿದ್ದುಪಡೆ) ಕಾಯದೆಯೆಂದು ಕರೆಯಲ್ಪಡಬಹುದು.

2. ಮುಂಬಯಿ ನಗರವನ್ನು ಹೊರತುಪಡಿಸಿ ಉಳಿದ ಇಡೀ ಮುಂಬಯಿ ಪ್ರಾಂತಕ್ಕೆ ಈ ಕಾಯದೆಯು ಹತ್ತುವದು.

3. ಪ್ರಾಂತಿಕ ಸರಕಾರವು ಸರಕಾರೀ ಗಜೆಟ್ಟಿನಲ್ಲಿ ಪ್ರಕಟನೆ ಕೊಟ್ಟು ಈ ಸಂಬಂಧವಾಗಿ ಗೊತ್ತುಪಡಿಸಿದ ತಾರೀಖಿನಿಂದ ಈ ಕಾಯದೆಯು ಬಳಕೆಯಲ್ಲಿ ಬರತಕ್ಕದ್ದು.

**೨. ವ್ಯಾಖ್ಯೆಗಳು**

ಈ ಕಾಯದೆಯಲ್ಲಿ ವಿಷಯಕ್ಕೆ ಅಥವಾ ಸಂದರ್ಭಕ್ಕೆ ವಿರುದ್ಧವಾದ ಅರ್ಥವೇನಾದರೂ ಇದ್ದಹೊರತು ಕೆಳಗಿನ ಪದಗಳ ವ್ಯಾಖ್ಯೆಗಳು ಹೀಗಿವೆ:-

1. 'ಒಕ್ಕಲತನ'ವೆಂಬ ಪದದಲ್ಲಿ ತೋಟದ ಬೇಸಾಯ, ಇತರ ಬೆಳೆ ಮಾಡುವ ಕಸುಬು, ತೋಟದ ಹುಟ್ಟುವಳಿ, ಹೈನು ಬೆಳೆಸುವದು, ಕೋಳಿ ಸಾಕುವದು, ಬೀಜದ ಹೋರಿಗಳ ಸಂಗೋಪನ ಹಾಗು ಮೇಯಿಸುವದು ಇವೆಲ್ಲ ಸೇರುತ್ತವೆ. ಆದರೆ ಅದರಲ್ಲಿ ಕೇವಲ ಕಟ್ಟಿಗೆ ಕಡಿಯುವದು ಬರುವದಿಲ್ಲ.

2. 'ಸಹಕಾರಿ ಸಂಘ'ವೆಂದರೆ ೧೯೨೫ನೇ ಇಸವಿಯ ಮುಂಬಯಿ ಸರಕಾರದ ಸಹಕಾರಿ ಸಂಘಗಳ ಕಾಯದೆಯ ಪ್ರಕಾರ ರಜಿಸ್ಟರಾದ ಸಂಘವೆಂದು ಅಥವಾ ಮೇಲೆ ಹೇಳಿದ ಕಾಯದೆಯ ಪ್ರಕಾರ ರಜಿಸ್ಟರಾಗಿದೆಯೆಂದು ಭಾವಿಸಲ್ಪಟ್ಟ ಸಂಘವೆಂದು ಅರ್ಥ.

3. 'ಸುಧಾರಣೆ'ಯೆಂದರೆ ಯಾವದೇ ಹೊಲದ ಸಂಬಂಧದಲ್ಲಿ ಆ ಹೊಲದ ಬೆಲೆಯನ್ನು ಹೆಚ್ಚಿಸುವ ಯಾವದೇ ಕೆಲಸವೆಂದು ಮತ್ತು ಯಾವ ಉದ್ದೇಶಕ್ಕಾಗಿ ಅದು ಧಾರಣ ಮಾಡಲ್ಪಟ್ಟಿದೆಯೋ ಅದಕ್ಕೆ ಅನುಗುಣವಾಗುವ ಹಾಗು ಅದಕ್ಕೆ ಯೋಗ್ಯವಾದ ಕೆಲಸವೆಂದರ್ಥ. ಇದರಲ್ಲಿ

(ಅ) ಒಕ್ಕಲತನದ ಉದ್ದೇಶಕ್ಕಾಗಿ ಬೇಕಾಗುವ ಕೆರೆ, ಬಾವಿ, ಕಾಲುವೆ, ಒಡ್ಡು ಒತ್ತಲುಗಳು ಮತ್ತು ನೀರಿನ ಸಂಗ್ರಹ, ಪೂರೈಕೆ ಅಥವಾ ಒಕ್ಕಲತನಕ್ಕೋಸುಗ ಬಿಡುಗಾವಲಿಗೆ ಬೇಕಾಗುವ ಇತರ ಕೆಲಸಗಳು

(ಬ) ಭೂಮಿಯ ಮೇಲೆ ಬಿದ್ದ ಹೆಚ್ಚಿನ ನೀರು ಹರಿದುಹೋಗಲು ಅಥವಾ ನೆರೆಯ ಹಾವಳಿಯಿಂದ ಅಥವಾ ಮಣ್ಣು ಹರಿದುಹೋಗುವದರಿಂದ ಇಲ್ಲವೆ ನೀರಿನಿಂದಾಗುವ ಇತರ ಅಪಾಯದಿಂದ ಭೂಮಿಯನ್ನು ರಕ್ಷಿಸಲು ಬೇಕಾಗುವ ಕೆರೆಕಟ್ಟೆಗಳ ರಚನೆ,

(ಕ) ಹರಿದು ಹೋದ ಹೊಲವನ್ನು ಮರಳಿ ಸಾಧಿಸುವದು, ಹಸನಮಾಡುವದು, ಬೇಲೀ ಹಚ್ಚುವದು, ಹೊಲವನ್ನು ಸಮಪಾತಳಿ ಮಾಡುವದು.

(ಡ) ಒಕ್ಕಲತನದ ಸಲುವಾಗಿ ಹೊಲದ ಅನುಕೂಲ ಅಥವಾ ಲಾಭದಾಯಕ ಉಪಯೋಗಕ್ಕೆ ಬೇಕಾಗುವ ಕಟ್ಟಡಗಳನ್ನು ಆ ಹೊಲದಲ್ಲಿ ಕಟ್ಟಿಸುವದು, ಮತ್ತು

(ಈ) ಹಿಂದೆ ಹೇಳಿದ ಕೆರೆಕಟ್ಟೆಗಳಲ್ಲಿ ಯಾವುದನ್ನಾದರೂ ಹೊಸತುಗೊಳಿಸುವದು, ಅಥವಾ ಪುನರ್ರಚನೆ, ಅಥವಾ ಅದರಲ್ಲೇನಾದರೂ ಹೆಚ್ಚುಕಡಿಮೆ ಮಾಡುವದು, ಅಥವಾ ಅದಕ್ಕೇನನ್ನಾದರೂ ಹೆಚ್ಚಿಗೆ ಕೂಡಿ

ಸುವದು. ಇವೇ ಮೊದಲಾದ ಪಾಡಿಕೆಯ ದುರಸ್ತಿಯ ಕೆಲಸಗಳಲ್ಲದಂಥವು ಗಳು ಸಮಾವೇಶವಾಗುತ್ತವೆ. ಆದರೆ ಒಕ್ಕಲತನದ ಪಾಡಿಕೆಯ ರೀತಿಯಲ್ಲಿ ರೈತರಿಂದ ಸರ್ವಸಾಧಾರಣವಾಗಿ ಮಾಡಲ್ಪಡುವ ಒಡ್ಡು ಒತ್ತಲ, ಸಮ ಪಾತಳಿ ಮಾಡುವದು ಬೇಲಿ ಹಚ್ಚುವದು, ಹಸನಮಾಡುವದು, ತಾತ್ಪೂರ್ತಿಕ ಬಾವಿಗಳು, ಕಾಲುವೆಗಳು, ಮತ್ತು ಇತರ ಕಾಮಗಾರಿಗಳು ಇದರಲ್ಲಿ ಬರುವದಿಲ್ಲ.

4. "ಭೂಮಿ"ಯೆಂದರೆ ಒಕ್ಕಲತನಕ್ಕೆ ಉಪಯೋಗಿಸಲಾಗುತ್ತಿರುವ ಭೂಮಿಯೆಂದರ್ಥ. ಮತ್ತು ಅದರಲ್ಲಿ ಅದಕ್ಕೆ ಸಂಬಂಧಿಸಿದ ಒಕ್ಕಲತನ ಕಟ್ಟಡಗಳ ಸ್ಥಳವು ಕೂಡ ಬರುತ್ತದೆ.

5. "ಮಾಮಲೇದಾರ" ಎಂಬಲ್ಲಿ ಮಹಾಲಕರಿ ಮತ್ತು ಈ ಕಾಯದೆಯ ಪ್ರಕಾರ ಮಾಮಲೇದಾರನ ಕೆಲಸಗಳನ್ನು ಮಾಡಲು ಪ್ರಾಂತಿಕ ಸರಕಾರದವರು ನೇಮಿಸುವ ಯಾವದೇ ಇತರ ಅಧಿಕಾರಿಯ ಸಮಾವೇಶ ವಾಗುವದು.

6. "ಮನುಷ್ಯ" ಎಂಬ ಪದದಲ್ಲಿ ಅವಿಭಕ್ತ ಹಿಂದೂ ಕುಟುಂಬವೂ ಸೇರುತ್ತದೆ.

7. "ಗೊತ್ತುಪಡಿಸಿದ" ಎಂದರೆ ಈ ಕಾಯದೆ ಪ್ರಕಾರ ಮಾಡಲ್ಪಟ್ಟ ನಿಯಮಗಳಿಂದ ಗೊತ್ತುಪಡಿಸಿದ ಎಂದರ್ಥ.

8. "ಒಕ್ಕಲತನದ ಲಾಭಗಳು" ಎಂದರೆ ಸ್ಥೂಲ ಉತ್ಪನ್ನದೊಳಗಿಂದ ಹೊಲದಲ್ಲಿ ದುಡಿದ ಸಾಗುವಳಿದಾರನ ಕೂಲಿ ಸಹಿತ ಸಾಗುವಳಿಯ ಖರ್ಚನ್ನು ಕಳೆದ ಬಳಿಕ ಉಳಿದ ಹೆಚ್ಚಿನ ಉಳಿತಾಯವೆಂದರ್ಥ.

9. "ಸಮಂಜಸ ಗೇಣಿ ( ಲಾವಣಿ )" ಅಂದರೆ ೧೨ ನೇ ಕಲಮಿನ ಮೇರೆಗೆ ನಿಶ್ಚಿತಪಡಿಸಿದ ಲಾವಣಿ.

10. "ಲಾವಣಿ ( ಗೇಣಿ )" ಅಂದರೆ ರೈತನಿಂದ ಹೊಲದ ಉಪಯೋಗ ಅಥವಾ ಹಿಡುವಳಿಯ ಬಗ್ಗೆ ಕೊಡಲ್ಪಟ್ಟ ಅಥವಾ ಕೊಡಲ್ಪಡುವ ಧನ ಅಥವಾ ಧಾನ್ಯ ಅಥವಾ ಉಭಯ ರೂಪಿಯಾದ ಪ್ರತಿಮೌಲ್ಯವೆಂದರ್ಥ. ಆದರೆ ಇದರಲ್ಲಿ ಯಾವದೇ ವೈಯಕ್ತಿಕ ಸೇವೆಯ ಸಮಾವೇಶವಾಗುವದಿಲ್ಲ.

10 A. "ಕೃಷಿಮಾಡುವದು" ಎಂದರೆ ಒಕ್ಕಲತನದ ಯಾವುದೇ ಕೆಲಸವನ್ನು ಮಾಡುವದೆಂದರ್ಥ.

11. "ಸ್ವತಃ ಹೊಲ ಮಾಡುವದು" ಎಂದರೆ ಸ್ವಂತದ ಪರವಾಗಿ
(i) ಸ್ವಂತ ದುಡಿತದಿಂದ ಅಥವಾ
(ii) ಸ್ವಂತ ಕುಟುಂಬದಲ್ಲಿಯ ಯಾರೊಬ್ಬರ ದುಡಿಮೆಯಿಂದ ಅಥವಾ
(iii) ನಗದು ಅಥವಾ ಧಾನ್ಯರೂಪದಿಂದ (ಆದರೆ ಬೆಳೆಯಕೋರು ಪಾಲಿನಿಂದಲ್ಲ) ಕೂಲಿಯ ಕರಾರಿನ ಮೇಲೆ ಆಳುಗಳನ್ನು ಹಚ್ಚಿ ಇಲ್ಲವೆ ಸ್ವಂತ ವೈಯ್ಯಕ್ತಿಕ ಮೇಲ್ವಿಚಾರಣೆಗಧೀನವಾಗಿ ಅಥವಾ ಮನೆತನದ ಪೈಕಿ ಯಾರೊಬ್ಬರ ಮೇಲ್ವಿಚಾರಣೆಯ ಕೆಳಗೆ ಕೂಲಿ ಹಚ್ಚಿದ ದುಡಿತದಿಂದ ಹೊಲ ಸಾಗು ಮಾಡುವದೆಂದರ್ಥ.

**೧ನೇ ಸ್ಪಷ್ಟೀಕರಣ**

ಅಲ್ಪವಯಿ ಅಥವಾ ವಿಧವೆ ಅಥವಾ ಯಾವದೇ ಬಗೆಯ ಶಾರೀರಿಕ ಇಲ್ಲವೆ ಮಾನಸಿಕ ದೌರ್ಬಲ್ಯವುಳ್ಳ ಯಾವನೇ ರೈತನು ತಮ್ಮ ತಮ್ಮ ಆಳುಗಳ ಮುಖಾಂತರ ಅಥವಾ ಬಾಡಿಗೆಯ ಕೂಲಿಕಾರರಿಂದ ಹೊಲ ಮಾಡಿಸಿದರೂ ಅವನು ಅಥವಾ ಅವಳು ಸ್ವತಃ ಹೊಲ ಮಾಡಿರುವದಾಗಿ ಭಾವಿಸತಕ್ಕದು.

**೨ನೇ ಸ್ಪಷ್ಟೀಕರಣ**

ಅವಿಭಕ್ತ ಹಿಂದೂ ಕುಟುಂಬದ ವಿಷಯದಲ್ಲಿ ಆ ಕುಟುಂಬದ ಯಾವನೇ ಒಬ್ಬ ಮನುಷ್ಯನು ಹೊಲ ಮಾಡುತ್ತಿದ್ದರೆ ಆ ಹೊಲವು ಸ್ವತಃ ಸಾಗುಮಾಡಲ್ಪಟ್ಟಿದೆಯೆಂದು ಭಾವಿಸತಕ್ಕದ್ದು.

12. 'ವರ್ಷ'ವೆಂದರೆ ೩೧ ನೇ ಮಾರ್ಚಕ್ಕೆ ಮುಗಿಯುವ ಅಥವಾ ಯಾವದೇ ಒಂದು ವಿಶಿಷ್ಟ ಕ್ಷೇತ್ರದ ಬಗ್ಗೆ ಪ್ರಾಂತಿಕ ಸರಕಾರದವರು ಪ್ರಕಟನೆಯ ಮೂಲಕ ಗೊತ್ತುಪಡಿಸುವಂಥ ತಾರೀಖಿಗೆ ಮುಗಿಯುವ ಅವಧಿಯೆಂದರ್ಥ.

13. ಈ ಕಾಯದೆಯಲ್ಲಿ ವ್ಯಾಖ್ಯೆ ಮಾಡಲ್ಪಡದೆ ಉಪಯೋಗಿಸಲಾದ ಇತರ ಕೆಲ ಶಬ್ದಗಳಿಗೆ ಹಾಗೂ ಪದಗಳಿಗೆ ೧೮೭೯ ನೇ ಇಸವಿಯ ಮುಂಬಯಿ ಭೂಕಂದಾಯ ಶಾಸನದಲ್ಲಿ ವಿವಕ್ಷಿತವಾದ ಅರ್ಥಗಳುಂಟೆಂದು ತಿಳಿಯತಕ್ಕದ್ದು.

# ೧ (ಅ) ನೇ ಪ್ರಕರಣ

## ಸಾಗುವಳಿದಾರರು

೬ ಅ. (1) ಬೇರೊಬ್ಬರ ಒಡೆತನಕ್ಕೆ ಸೇರಿದ ಯಾವದೇ ಭೂಮಿಯನ್ನು ಕಾಯದೆಗನುಸರಿಸಿ ಸಾಗುಮಾಡುತ್ತಿರುವ ಮನುಷ್ಯನು ಆ ಭೂಮಿಯು ಒಡೆಯನಿಂದ ಸ್ವಂತವಾಗಿ ಸಾಗುಮಾಡಲ್ಪಟ್ಟಿರದಿದ್ದರೆ ಅಥವಾ ಅಂತಹ ಮನುಷ್ಯನು

(ಅ) ಒಡೆಯನ ಕುಟುಂಬದವನಾಗಿರದಿದ್ದರೆ ಇಲ್ಲವೆ

(ಬ) ನಗದು ಇಲ್ಲವೆ ಧಾನ್ಯರೂಪದಿಂದ (ಆದರೆ ಬೆಳೆಯ ಕೋರು ಪಾಲಿನಿಂದಲ್ಲ) ಕೂಲಿಯ ಕರಾರಿನ ಮೇಲೆ ನಿಯಮಿಸಲಾದ ಸೇವಕ ಇಲ್ಲವೆ ಒಡೆಯನ ಖುದ್ದ ಮೇಲ್ವಿಚಾರಣೆಗೆ ಅಥವಾ ಕುಟುಂಬದ ಯಾವನೊಬ್ಬ ವ್ಯಕ್ತಿಯ ಮೇಲ್ವಿಚಾರಣೆಗೆ ಒಳಪಟ್ಟು ಭೂಮಿಯನ್ನು ಸಾಗುಮಾಡುವ ಬಾಡಿಗೆಯ ಕೂಲಿಯಾಳು ಆಗಿರದಿದ್ದರೆ

ಹಾಗೂ ಈ ೧೯೪೬ನೇ ಇಸವಿಯ ಮುಂಬಯಿ ಹೊಲಸಾಗುವಳಿ (ತಿದ್ದುಪಡಿ) ಕಾಯದೆಯು ಬಳಕೆಯಲ್ಲಿ ಬಂದ ಮೇಲೆ ಒಂದು ವರ್ಷ ದೊಳಗಾಗಿ ಒಡೆಯನು ಯಾರ ಅಧಿಕಾರ ಕ್ಷೇತ್ರದಲ್ಲಿ ಆ ಭೂಮಿಯಿದೆಯೋ ಆ ಮಾಮಲೇದಾರನ ಕಡೆಗೆ ಆ ಮನುಷ್ಯನು ಸಾಗುವಳಿದಾರನಲ್ಲೆಂಬ ಬಗ್ಗೆ ಅರ್ಜಿಯನ್ನು ಮಾಡಿಕೊಂಡ ಹೊರತು ಸಾಗುವಳಿದಾರನೆಂದೇ ತಿಳಿಯ ತಕ್ಕದ್ದು.

(2) 1ನೇ ಉಪಕಲಮಿನ ಮೇರೆಗೆ ಅರ್ಜಿಯನ್ನು ಮಾಡಿ ಕೊಂಡಲ್ಲಿ ಹಾಗೂ ಮಾಮಲೇದಾರನು ಆ ಬಗೆಯ ಘೋಷಣೆಯನ್ನು ಮಾಡಲು ನಿರಾಕರಿಸಿದಲ್ಲಿ ಮತ್ತು ೧೩ನೇ ಕಲಮಿನ ೩ನೇ ಉಪಕಲಮಿನ ಪ್ರಕಾರ ಮಾಡಿಕೊಂಡ ಅಪೀಲಿನಲ್ಲಿ ಕಲೆಕ್ಟರರು ಮಾಮಲೇದಾರನ ನಿರ್ಣಯವನ್ನು ತಿರುಗಿಸದಿದ್ದರೆ ಅಥವಾ ೨೮ನೇ ಕಲಮಿನ ಪ್ರಕಾರ ಪ್ರಾಂತಿಕ ಸರಕಾರಕ್ಕೆ ಮಾಡಿಕೊಂಡ ಮೇಲ್ಮೊರೆಯಲ್ಲಿಯೂ ಮಾಮಲೇ ದಾರನ ತೀರ್ಪು ತಿರುಗದಿದ್ದರೆ ಈ ಕಾಯದೆಯ ಉದ್ದೇಶಗಳಿಗೆ ಅಂತಹನು ಸಾಗುವಳಿದಾರನೆಂದೇ ತಿಳಿಯತಕ್ಕದ್ದು.

---

## ೨ನೇ ಪ್ರಕರಣ

## ಸಂರಕ್ಷಿತ ರೈತರು

೩. ಯಾವುದೇ ಒಂದು ಹೊಲದ ಬಗ್ಗೆ ಒಬ್ಬ ರೈತನು ಕೆಳಗಿನ ಸಂದರ್ಭಗಳಲ್ಲಿ ಸಂರಕ್ಷಿತ ರೈತನೆಂದು ಭಾವಿಸಲ್ಪಡತಕ್ಕದ್ದು.

(ಅ) (i) ೧೯೩೮ನೇ ಇಸವಿಯ ಜನವರಿ ೧ನೇ ತಾರೀಖಿನಿಂದ ತತ್‌ಕ್ಷಣ ಹಿಂದೆ ಅಥವಾ

(ii) ೧೯೪೫ನೇ ಇಸವಿಯ ಜನವರಿ ೧ನೇ ತಾರಿಖಿನಿಂದ ತತ್‌ಕ್ಷಣ ಹಿಂದೆ ಒಂದೇಸವನೆ ಆರು ವರ್ಷಗಳಿಗಿಂತ ಕಡಿಮೆಯಲ್ಲದಷ್ಟು ಅವಧಿಯವರೆಗೆ ಆ ಹೊಲವನ್ನು ಹಿಡಿದಿದ್ದರೆ (ಸಾಗುವಮಾಡುತ್ತ ಬಂದಿದ್ದರೆ) ಮತ್ತು

(ಬ) ಮೇಲೆ ಹೇಳಿದ ಅವಧಿಯಲ್ಲಿ ಅಂಥ ಹೊಲವನ್ನು ಸ್ವತಃ ಸಾಗುವಮಾಡುತಿದ್ದರೆ,

ಅಂತಹ ರೈತನು ಸಂರಕ್ಷಿತ ರೈತನಾಗುವನು.

**೧ನೇ ಸ್ಪಷ್ಟೀಕರಣ**

೧೯೩೮ನೇ ಇಸವಿಯ ೧ನೇ ತಾರೀಖಿನ ದಿವಸ ಅಥವಾ ೧೯೪೫ನೇ ಇಸವಿಯ ೧ನೇ ತಾರೀಖಿನ ದಿವಸ ಸಂದರ್ಭವಿದ್ದಂತೆ ಆ ಹೊಲವನ್ನು ಹಿಡಿದ ಮನುಷ್ಯನಿಗೆ ರೈತತನದ ಹಕ್ಕುಗಳು ಪರಂಪರೆ ಅಥವಾ ದಾಯದಿಂದ ಪ್ರಾಪ್ತವಾಗಿದ್ದರೆ ಅಥವಾ ಆ ಹೊಲವನ್ನು ರೈತನೆಂಬ ನಾತೆಯಿಂದ ಹಿಡಿದಿದ್ದರೆ ಮತ್ತು ಅಂಥ ಎರಡನೇ ಮನುಷ್ಯನ ವಾರಸದಾರನು ಇವನಿದ್ದರೆ ಈ ಕಲಮಿನ ಪ್ರಕಾರ ಲೆಕ್ಕ ಮಾಡಬೇಕಾದ ಆರು ವರ್ಷಗಳ ಅವಧಿಯನ್ನು ಎಣಿಸುವಾಗ್ಗೆ ಆತನ ಪೂರ್ವಭಾವಿಯಾಗಿದ್ದ ರೈತನ ಹಿಡಿತದಲ್ಲಿ ಆ ಹೊಲವಿದ್ದ ಅವಧಿಯನ್ನು ಲೆಕ್ಕಕ್ಕೆ ಹಿಡಿಯತಕ್ಕದ್ದು.

**೨ನೇ ಸ್ಪಷ್ಟೀಕರಣ**

೧೯೩೮ನೇ ಇಸವಿಯ ೧ನೇ ತಾರೀಖಿನ ದಿವಸ ಅಥವಾ ೧೯೪೫ನೇ ಇಸವಿಯ ೧ನೇ ತಾರೀಖಿನ ದಿವಸ ಸಂದರ್ಭವಿದ್ದಂತೆ ಹೊಲವನ್ನು ಹಿಡಿದ ಮನುಷ್ಯನು ಅದೇ ಒಡೆಯನ ಕಡೆಯಿಂದ ರೈತನೆಂಬ ನಂಟುತನದಿಂದ ಆ ತಾರೀಖಿಗಿಂತ ಮುಂಚೆ ಯಾವದೇ ಕಾಲಕ್ಕೆ ಅದೇ ಹಳ್ಳಿಯಲ್ಲಿಯ ತಾನು ಸ್ವತಃ ಮಾಡುತ್ತಿದ್ದ ಇತರ ಯಾವದೇ ಹೊಲವನ್ನು ಹಿಡಿದಿದ್ದರೆ ಹೀಗೆ

ಹಿಡಿದ ಹೊಲದ ಅವಧಿಯನ್ನು ಈ ಕಲಮಿನ ಪ್ರಕಾರ ಲೆಕ್ಕಮಾಡ ಬೇಕಾದ ಆರು ವರ್ಷಗಳ ಲೆಕ್ಕಕ್ಕೆ ಹಿಡಿಯತಕ್ಕದ್ದು.

**೩ನೇ ಸ್ಪಷ್ಟೀಕರಣ**

ಇಬ್ಬರು ಅಥವಾ ಅದಕ್ಕಿಂತ ಹೆಚ್ಚಿಗೆ ಜನರು ಸಂಯುಕ್ತ ರೀತಿಯಿಂದ ರೈತನಾತೆಯಿಂದ ಯಾವದಾದರೊಂದು ಹೊಲವನ್ನು ಹಿಡಿದರೆ ಅವರಲ್ಲಿ ಯಾವನಾದರೊಬ್ಬನು ಸ್ವತಃ ಹೊಲವನ್ನು ಮಾಡುತ್ತಿದ್ದರೆ ಮತ್ತು ಈ ಕಲಮಿನಲ್ಲಿ ಹೇಳಲಾದ ಇತರ ಶರ್ತುಗಳು ಪೂರೈಸಲ್ಪಟ್ಟರೆ ಅವರೆಲ್ಲರೂ ಆ ಹೊಲದ ಬಗ್ಗೆ ಸಂರಕ್ಷಿತ ರೈತರೆಂದು ತಿಳಿಯತಕ್ಕದ್ದು.

೩ ಅ. 1. ೧೯೪೬ ನೇ ಇಸವಿಯ ಮುಂಬಯಿ ಹೊಲ ಸಾಗುವಳಿ (ತಿದ್ದುಪಡೆ) ಕಾಯದೆಯು ಬಳಕೆಯಲ್ಲಿ ಬಂದ ತಾರೀಖಿನಿಂದ ಒಂದು ವರ್ಷ ಮುಗಿದ ಮೇಲೆ, ಆ ಅ ವ ಧಿ ಯ ಒಳಗಾಗಿ ತನ್ನ ಹೊಲವು ಯಾವ ಮಾಮಲೇದಾರನ ಅಧಿಕಾರ ಕ್ಷೇತ್ರದಲ್ಲಿರುವದೋ ಆ ಮಾಮಲೇದಾರನ ಕಡೆಗೆ ಆ ಹೊಲದ ಒಡೆಯನು ಹೊಲವನ್ನು ಮಾಡುತ್ತಿರುವ ರೈತನು ಸಂರ ಕ್ಷಿತ ರೈತನಲ್ಲೆಂದು ಘೋಷಿಸುವ ಬಗ್ಗೆ ಅರ್ಜಿಯನ್ನು ಮಾಡಿದ ಹೊರತು ಪ್ರತಿಯೊಬ್ಬ ರೈತನು ಈ ಕಾಯದೆಯ ಉದ್ದೇಶಗಳಿಗೆ ಸಂರಕ್ಷಿತ ರೈತನೆಂದು ತಿಳಿಯಲ್ಪಡತಕ್ಕದ್ದು ಮತ್ತು ಇಂತಹ ಸಂರಕ್ಷಿತ ರೈತನೆಂಬ ಆತನ ಹಕ್ಕು ಗಳನ್ನು ಹಕ್ಕು ರಜಿಸ್ಟರದಲ್ಲಿ ನಿರ್ದಿಷ್ಟ ಪಡಿಸತಕ್ಕದ್ದು.

2. 1 ನೇ ಉಪಕಲಮಿನ ಪ್ರಕಾರ ಮಾಮಲೇದಾರನ ಕಡೆಗೆ ಅರ್ಜಿ ಯನ್ನು ಮಾಡಿಕೊಂಡಲ್ಲಿ ಮತ್ತು ಆ ಬಗೆಯ ಘೋಷಣೆಯನ್ನು ಮಾಡಲು ಮಾಮಲೇದಾರನು ನಿರಾಕರಿಸಿದಲ್ಲಿ ಮತ್ತು ೧೩ ನೇ ಕಲಮಿನ ೩ ನೇ ಉಪ ಕಲಮಿನ ಮೇರೆಗೆ ಕಲೆಕ್ಟರರ ಕಡೆಗೆ ಮಾಡಿಕೊಂಡ ಅಪೀಲಿನಲ್ಲಿ ಅಥವಾ ೨೮ ನೇ ಕಲಮಿನ ಪ್ರಕಾರ ಪ್ರಾಂತಿಕ ಸರಕಾರಕ್ಕೆ ಮಾಡಿಕೊಂಡ ಮೇಲ್ಮೊರೆ ಯಲ್ಲಿ ಮಾಮಲೇದಾರರ ನಿರ್ಣಯವನ್ನು ರದ್ದುಪಡಿಸದಿದ್ದರೆ ಸಾಗುವಳಿ ದಾರನು ಈ ಕಾಯದೆಯ ಉದ್ದೇಶಗಳಿಗೆ ಸಂರಕ್ಷಿತ ಸಾಗುವಳಿದಾರನೆಂದು ತಿಳಿಯತಕ್ಕದ್ದು ಮತ್ತು ಇಂತಹ ಸಂರಕ್ಷಿತ ರೈತನೆಂಬ ಆತನ ಹಕ್ಕುಗಳು ಹಕ್ಕು ರಜಿಸ್ಟರದಲ್ಲಿ ನಿರ್ದಿಷ್ಟವಾಗತಕ್ಕದ್ದು.

**೧೯೩೭ ನೇ ಅಥವಾ ೧೯೪೫ ನೇ ಇಸವಿಯ ೧ ನೇ ಎಪ್ರೇಲದ ನಂತರ ಬಿಡಿಸಲ್ಪಟ್ಟ ರೈತರು ಸಂರಕ್ಷಿತ ರೈತರು.**

೪ 1. (ಅ) ೧೯೩೭ ನೇ ಇಸವಿಯ ಎಪ್ರೇಲ ೧ ನೇ ತಾರೀಖಿಗಿಂತ

ತತ್ಕ್ಷಣ ಹಿಂದ ಒಂದೇಸವನೆ ಆರು ವರ್ಷಗಳಿಗಿಂತ ಕಡಿಮೆಯಿಲ್ಲದಷ್ಟು ಅವಧಿಯವರೆಗೆ ಯಾವದೊಂದು ಭೂಮಿಯನ್ನು ಹಿಡಿದು ಸ್ವತಃ ಸಾಗು ಮಾಡುತ್ತಿದ್ದರೆ ಮತ್ತು ೫ ನೇ ಕಲಮಿನ ೨ ನೇ ಉಪಕಲಮಿನಲ್ಲಿ ನಿರ್ದಿಷ್ಟ ವಾದ ಕಾರಣಗಳಲ್ಲಿ ಯಾವದೊಂದು ಕಾರಣದ ಮೂಲಕ ಯೋಗ್ಯ ಕೋರ್ಟಿನ ಆಜ್ಞೆಯಿಲ್ಲದೆ ಬೇರೆ ರೀತಿಯಿಂದ ಆ ತಾರೀಖಿನ ದಿವಸ ಅಥವಾ ತದನಂತರ ಆ ಹೊಲದಿಂದ ಅವನನ್ನು ಬಿಡಿಸಿದ್ದರೆ ಅಥವಾ

(ಬ) ೧೯೪೪ ನೇ ಇಸವಿಯ ಎಪ್ರೀಲ ೧ ನೇ ತಾರೀಖಿಗಿಂತ ತತ್ಕ್ಷಣ ಹಿಂದೆ ಒಂದೇ ಸವನೆ ಆರುವರ್ಷಗಳಿಗಿಂತ ಕಡಿಮೆಯಲ್ಲದಷ್ಟು ಅವಧಿಯ ವರೆಗೆ ಯಾವುದೊಂದು ಹೊಲವನ್ನು ಹಿಡಿದು ಸ್ವತಃ ಸಾಗು ಮಾಡುತ್ತಾ ಬಂದಿದ್ದರೆ ಮತ್ತು ೫ ನೇ ಕಲಮಿನ ೨ ನೇ ಉಪಕಲಮಿನಲ್ಲಿ ನಿರ್ದಿಷ್ಟವಾದ ಕಾರಣಗಳಲ್ಲಿ ಯಾವುದೊಂದು ಕಾರಣದ ಮೂಲಕ ಯೋಗ್ಯ ಕೋರ್ಟಿನ ಆಜ್ಞೆಯಿಲ್ಲದೆ ಬೇರೆ ರೀತಿಯಿಂದ ಆ ತಾರೀಖಿನ ದಿವಸ ಅಥವಾ ತದನಂತರ ಆ ಹೊಲದಿಂದ ಅವನನ್ನು ಹೊರಗೆ ಹಾಕಿ ಬಿಡಿಸಿದ್ದರೆ

ಅಂತಹ ಪ್ರತಿಯೊಬ್ಬ ರೈತನು ಈ ಕಾಯದೆಯ ಉದ್ದೇಶಗಳಿಗೆ ಸಂರಕ್ಷಿತ ರೈತನೆಂದು ತಿಳಿಯತಕ್ಕದ್ದು.

ಆದರೆ (ಅ) ಉಪವಾಕ್ಯದ ಕೆಳಗೆ ಬರುವ ಪ್ರಕರಣಗಳಲ್ಲಿ ಆ ಹೊಲ ವಿದ್ದ ಪ್ರದೇಶದಲ್ಲಿ ಈ ಕಲಮು ಬಳಕೆಯಲ್ಲಿ ಬಂದ ತಾರೀಖಿನಿಂದ ನಾಲ್ಕು ತಿಂಗಳುಗಳೊಳಗಾಗಿ ಮತ್ತು (ಬ) ಉಪವಾಕ್ಯದ ಕೆಳಗೆ ಬರುವ ಪ್ರಕರಣ ಗಳಲ್ಲಿ ಮುಂಬಯಿ ಹೊಲಸಾಗುವಳಿ (ತಿದ್ದುಪಡಿ) ಕಾಯದೆ ಬಳಕೆಯಲ್ಲಿ ಬಂದ ತಾರೀಖಿನಿಂದ ಆರು ತಿಂಗಳುಗಳೊಳಗಾಗಿ ಹೊಲದೊಡೆಯನಿಗೆ ಲಾವಣಿಯ ಹಣವನ್ನು ಕೊಟ್ಟ ಹೊರತು, ೧೯೩೯ನೇ ಇಸವಿಯ ಮುಂಬಯಿ ಸಣ್ಣ ಹಿಡುವಳಿದಾರ ಕಾಯದೆಯ ೯ ನೇ ಕಲಮಿನಲ್ಲಿ ಹೇಳಿದ ಗೇಣಿಯನ್ನು ಕೊಡಲು ತಪ್ಪಿದ ಪ್ರಯುಕ್ತ ಹೊಲದಿಂದ ಬಿಡುಗಡೆಮಾಡಲ್ಪಟ್ಟ ಯಾವನೇ ರೈತನು ಈ ಕಾಯದೆಯ ಉದ್ದೇಶಗಳಿಗಾಗಿ ಸಂರಕ್ಷಿತ ರೈತನೆಂದು ತಿಳಿಯಲ್ಪಡುವದಿಲ್ಲ.

2. 1 ನೇ ಉಪಕಲಮಿನ (ಅ) ಉಪವಾಕ್ಯದ ಕೆಳಗೆ ಬರುವ ಪ್ರಕರಣಗಳಲ್ಲಿ ಆ ಹೊಲವಿದ್ದ ಪ್ರದೇಶದಲ್ಲಿ ಈ ಕಲಮು ಬಳಕೆಯಲ್ಲಿ ಬರುವ ತಾರೀಖಿನಿಂದ ಒಂದು ವರ್ಷದೊಳಗಾಗಿ ಮತ್ತು 1 ನೇ ಉಪಕಲ ಮಿನ (ಬ) ಉಪವಾಕ್ಯದ ಕೆಳಗೆ ಬರುವ ಪ್ರಕರಣಗಳಲ್ಲಿ ೧೯೪೬ನೇ ಇಸವಿಯ

ಮುಂಬಯಿ ಹೊಲಸಾಗುವಳಿ (ತಿದ್ದುಪಡೆ) ಕಾಯದೆಯು ಬಳಕೆಯಲ್ಲಿ ಬಂದ ತಾರೀಖಿನಿಂದ ಒಂದು ವರ್ಷದೊಳಗಾಗಿ ಸಂರಕ್ಷಿತ ರೈತನೆಂದು ಭಾವಿಸಲ್ಪಟ್ಟ ಮನುಷ್ಯನು ಹೊಲದ ಒಡೆಯನಿಗೆ ತನ್ನನ್ನು ಹೊಲದಿಂದ ಬಿಡಿಸಿದ ಕಾಲಕ್ಕೆ ಇದ್ದ ಅವೇ ಶರ್ತುಗಳ ಪ್ರಕಾರ ಭೂಮಿಯನ್ನು ಹಿಡಿಯಲು ಇಚ್ಛೆಯಿದೆಯೆಂದು ಬರಹದ ಮೂಲಕ ತಿಳಿಸಿದರೆ

(ಅ) (i) 1 ನೇ ಉಪಕಲಮಿನ (ಅ) ಉಪವಾಕ್ಯದ ಕೆಳಗೆ ಬರುವ ಪ್ರಕರಣಗಳಲ್ಲಿ ಆ ಹೊಲವಿದ್ದ ಪ್ರದೇಶದಲ್ಲಿ ಈ ಕಲಮು ಬಳಕೆಯಲ್ಲಿ ಬಂದ ತಾರೀಖಿಗೆ ಹೊಂದಿ ಮುಂದೆ ಬರುವ ಮೇ ೩೧ ನೇ ತಾರೀಖಿಗೆ ಮುಗಿವ ಅವಧಿಯ ವರೆಗೆ ಆ ಭೂಮಿಯು ಒಡೆಯನಿಂದ ಬೇರೊಬ್ಬರಿಗೆ ಸಾಗು ಮಾಡಲ್ಪಟ್ಟಿದ್ದರೆ, ಆ ಕೌಲಕರಾರು ಮುಗಿದ ತಾರೀಖಿನಿಂದ; ಮತ್ತು

(ii) ಉಳಿದ ಸಂದರ್ಭಗಳಲ್ಲಿ ಆ ಭೂಮಿಯಿದ್ದ ಪ್ರದೇಶವಲ್ಲಿ ಈ ಕಲಮು ಬಳಕೆಯಲ್ಲಿ ಬಂದ ತಾರೀಖಿಗೆ ಹೊಂದಿ ಮುಂದೆ ಕೂಡಲೆ ಬರುವ ಜೂನ ೧ ನೇ ತಾರಿಖಿನಿಂದ;

(ಬ) 1ನೇ ಉಪಕಲಮಿನ (ಬ) ಉಪವಾಕ್ಯದ ಕೆಳಗೆ ಬರುವ ಪ್ರಕರಣಗಳಲ್ಲಿ

(i) ೧೯೫೬ನೇ ಇಸವಿಯ ಮುಂಬಯಿ ಹೊಲಸಾಗುವಳಿ (ತಿದ್ದುಪಡೆ) ಕಾಯದೆ ಬಳಕೆಯಲ್ಲಿ ಬಂದ ತಾರೀಖಿಗೆ ಹೊಂದಿ ಕೂಡಲೆ ಮುಂದೆ ಬರುವ ಮೇ ೩೧ನೇ ತಾರೀಖಿನ ನಂತರ ಮುಗಿವ ಅವಧಿಯವರೆಗೆ ಆ ಭೂಮಿಯನ್ನು ಒಡೆಯನು ಬೇರೊಬ್ಬರಿಗೆ ಸಾಗು ಮಾಡಿದ್ದರೆ ಅಂತಹ ಕೌಲು ಕರಾರು ಮುಗಿದ ತಾರೀಖಿನಿಂದ;

(ii) ಉಳಿದ ಸಂದರ್ಭಗಳಲ್ಲಿ ೧೯೫೬ನೇ ಇಸವಿಯ ಮುಂಬಯಿ ಹೊಲಸಾಗುವಳಿ (ತಿದ್ದುಪಡೆ) ಕಾಯದೆ ಬಳಕೆಯಲ್ಲಿ ಬಂದ ತಾರೀಖಿಗೆ ಹೊಂದಿ ಕೂಡಲೆ ಮುಂದೆ ಬರುವ ಜೂನ ತಿಂಗಳ ೧ನೇ ತಾರೀಖಿನಿಂದ;

ಪುನಃ ಹೊಲದ ಕಬಜೆಯನ್ನು ಪಡೆಯಲು ಹಕ್ಕುದಾರನಾಗುವನು.

ಮತ್ತು ಈ ಪ್ರಕಾರ ಕಬಜೆಯನ್ನು ಪಡೆದುಕೊಂಡ ಮೇಲೆ ಈ ಕಾಯದೆಯ ಏರ್ಪಾಡುಗಳಿಗೊಳಪಟ್ಟು ಉಕ್ತವಾದ ಕರಾರು ಶರ್ತುಗಳಿಗೆ ಅಂಕಿತವಾಗಿ ಹೊಲವನ್ನು ಹಿಡಿಯತಕ್ಕದ್ದು.

3. ೭ನೇ ಕಲಮಿನ (೧) ನೇ ಉಪಕಲಮಿನಲ್ಲಿ ಹೇಳಿದ ಉದ್ದೇಶ

ಗಳಲ್ಲಾವುದೊಂದರ ಬಗ್ಗೆ ಹೊಲವನ್ನು ಒಡೆಯನು ಉಪಯೋಗಿಸುತ್ತಿದ್ದ ಸಂದರ್ಭಗಳಲ್ಲಿ ಈ ಕಲಮಿನ ಏರ್ಪಾಡುಗಳು ಅನ್ವಯಿಸುವದಿಲ್ಲ.

**೫. ಸಂರಕ್ಷಿತ ರೈತನ ಹಕ್ಕು ಹೊಣೆಗಳು**

1. ಸಂರಕ್ಷಿತ ರೈತನು ಕೊಡತಕ್ಕ ಲಾವಣಿಯೆಂದರೆ ತನ್ನ ಹಾಗೂ ಒಡೆಯನ ನಡುವೆ ಒಪ್ಪಿಗೆಯಾದ ಲಾವಣಿ ಅಥವಾ ಇಂಥ ಒಡಂಬಡಿಕೆ ಇಲ್ಲವ ಪಕ್ಷವಲ್ಲಿ ಆ ಆ ಸ್ಥಳದಲ್ಲಿಯ ಸಂಪ್ರದಾಯ ರೂಢಿಗಳ ಪ್ರಕಾರ ಕೊಡತಕ್ಕ ಲಾವಣಿ ಅಥವಾ ಇಂಥ ಒಡಂಬಡಿಕೆಯಾಗಲಿ ರೂಢಿಯಾಗಲಿ ಇಲ್ಲದಿದ್ದ ಪಕ್ಷದಲ್ಲಿ ಅಥವಾ ಇಂಥ ರೂಢಿ ಒಡಂಬಡಿಕೆಗಳ ಪ್ರಕಾರ ಕೊಡ ಬೇಕಾದ ಲಾವಣಿಯ ಸಮಂಜಸತೆಯ ಬಗ್ಗೆ ವಾದವಿವಾದವಿದ್ದ ಪಕ್ಷದಲ್ಲಿ "ಸಮಂಜಸ ಲಾವಣಿ" ಯೆಂದಿರತಕ್ಕದ್ದು.

2. ಯಾವದೇ ಒಡಂಬಡಿಕೆ, ರೂಢಿ, ಅಥವಾ ಕೋರ್ಟಿನ ಇಲ್ಲವೆ ಕಾಯದೆಯ ಹುಕುಂನಾಮೆ ಅಥವಾ ಹುಕುಮು ಇದ್ದಾಗ್ಯಾದರೂ ಸಂರಕ್ಷಿತ ರೈತನಿಂದ ಆ ನಾತೆಯ ಪ್ರಕಾರ ಹಿಡಿಯಲ್ಪಟ್ಟ ಯಾವದೇ ಹೊಲದ ಸಾಗುವಳಿ ರೈತತನವು ಕೆಳಗಿನ ಸಂದರ್ಭಗಳ ಹೊರತು ಕೊನೆಗಾಣ ಲಾರದು.

(ಅ) ೩ ನೇ ಕಲಮಿನ (ಅ) ಉಪವಾಕ್ಯದ (i) ಒಳಮಾತಿನ ಕೆಳಗೆ ಬರುವ ಪ್ರಕರಣಗಳಲ್ಲಿ ಆ ಹೊಲವು ಇದ್ದ ಪ್ರದೇಶದಲ್ಲಿ ಈ ಕಲಮು ಬಳಕೆಯಲ್ಲಿ ಬಂದ ವರ್ಷದ ಹಿಂದೆ ಕೂಡಲೆ ಹೋದ ವರ್ಷದ ಮಾರ್ಚ ೩೧ ನೇ ತಾರೀಖಿಗೆ ಮುಗಿವ ವರ್ಷದ ಬಗ್ಗೆ ಬಾಕಿಯಿದ್ದ ಲಾವಣಿಯನ್ನು ಈ ಕಲಮು ಬಳಕೆಯಲ್ಲಿ ಬಂದ ತಾರೀಖಿನಿಂದ ನಾಲ್ಕು ತಿಂಗಳೊಳಗಾಗಿ ತೀರಿಸಲು ತಪ್ಪಿದ ಹೊರತು, ಮತ್ತು ಸದರೀ ಉಪವಾಕ್ಯದ (ii) ನೇ ಒಳಮಾತಿನ ಕೆಳಗೆ ಬರುವ ಪ್ರಕರಣಗಳಲ್ಲಿ ೧೯೪೬ ನೇ ಇಸವಿಯ ಮುಂಬಯಿ ಹೊಲಸಾಗುವಳಿ (ತಿದ್ದುಪಡೆ) ಕಾಯದೆಯು ಬಳಕೆಯಲ್ಲಿ ಬಂದ ವರ್ಷದ ಹಿಂದೆ ಕೂಡಲೆ ಹೋದ ವರ್ಷದ ಮಾರ್ಚ ೩೧ ನೇ ತಾರೀಖಿಗೆ ಮುಗಿವ ವರ್ಷದ ಬಗ್ಗೆ ಬರತಕ್ಕ ಲಾವಣಿಯ ಬಾಕಿಯನ್ನು —ಏನಾದರೂ ಇದ್ದರೆ— ಈ ಕಾಯದೆಯು ಬಳಕೆಯಲ್ಲಿ ಬಂದ ತಾರೀಖಿ ನಿಂದ ಆರು ತಿಂಗಳುಗಳೊಳಗಾಗಿ ತೀರಿಸಲು ತಪ್ಪಿದ ಹೊರತು.

(ಬ) ೧೮೭೯ನೇ ಇಸವಿಯ ಮುಂಬಯಿ ಭೂಕಂದಾಯ ಶಾಸನದ ಪ್ರಕಾರ ಮಾಡಲ್ಪಟ್ಟ ನಿಯಮಗಳ ಮೇರೆಗೆ ಆ ವರ್ಷದ ಬಗ್ಗೆ ಕೊಡತಕ್ಕ

ಕಂದಾಯದ ಕಡೆಯ ಕಂತಿನ ಸಲುವಾಗಿ ಗೊತ್ತುಪಡಿಸಿದ ತಾರೀಖಿನಿಂದ ಹದಿನೈದು ದಿನಗಳೊಳಗಾಗಿ ತನ್ನ ಪ್ರಕರಣಕ್ಕೆ ಅನ್ವಯಿಸುವ (ಅ) ಉಪವಾಕ್ಯದಲ್ಲಿ ಉಕ್ತವಾದ ವರ್ಷದ ಮುಂದಿನ ಯಾವದೇ ವರ್ಷದಲ್ಲಿ ಆ ವರ್ಷದ ಬಗ್ಗೆ ಆ ಹೊಲದ ಸಾಗುವಳಿಯ ನಿಮಿತ್ತವಾಗಿ ಕೊಡತಕ್ಕ ಲಾವಣಿಯ ಹಣವನ್ನು ಕೊಡಲು ತಪ್ಪಿದ ಹೊರತು ಅಥವಾ ಸಮಂಜಸ ಲಾವಣಿಯನ್ನು ನಿರ್ಣಯಿಸುವ ಕುರಿತು ೧೨ನೇ ಕಲಮಿನ ಪ್ರಕಾರ ಮಾಮಲೇದಾರ ಅಥವಾ ಒಂದನೇ ವರ್ಗದ ಮುನಸುಫರ ಮುಂದೆ ಅರ್ಜಿಯು ವಿಚಾರಣಾವಸ್ಥೆಯಲ್ಲಿದ್ದರೆ ಹಿಂದೆ ಹೇಳಿದ ತಾರೀಖಿನಿಂದ ೧೫ ದಿನಗಳೊಳಗಾಗಿ ತಾನು ಇಂಥ ಅರ್ಜಿಯನ್ನು ಮಾಡಿರದಿದ್ದರೆ ಆ ವರ್ಷದ ಬಗ್ಗೆ ಕೊಡಬೇಕಾಗುತ್ತಿದ್ದ ಲಾವಣಿ ಹಣದಷ್ಟು ಹಣವನ್ನು ಮಾಮಲೇದಾರರ ಕಡೆಗಾಗಲಿ ಇಲ್ಲವೆ ಒಂದನೇ ವರ್ಗದ ಮುನಸುಫರ ಕಡೆಗಾಗಲಿ ಪ್ರಸಂಗವಿದ್ದಂತೆ ಹಾಜರಪಡಿಸಲು ತಪ್ಪಿದ ಹೊರತು ಮತ್ತು ೧೨ನೇ ಕಲಮಿನ ಪ್ರಕಾರ ಗೊತ್ತುಪಡಿಸಿದ ಸಮಂಜಸ ಲಾವಣಿ ಹಣವು ಅವನಿಂದ ಇಡುಗಂಟಾಗಿ ಇಡಲ್ಪಟ್ಟ ಹಣಕ್ಕಿಂತ ಹೆಚ್ಚಿಗಿದ್ದ ಪಕ್ಷದಲ್ಲಿ ಮಾಮಲೇದಾರ ಅಥವಾ ಒಂದನೇ ವರ್ಗದ ಮುನಸುಫರ ನಿರ್ಣಯವಾದ ತಾರೀಖಿನಿಂದ ಎರಡು ತಿಂಗಳುಗಳೊಳಗಾಗಿ ಬಾಕಿ ಹಣವನ್ನು ಹಾಜರಪಡಿಸಲು ತಪ್ಪಿದ ಹೊರತು

(ಕ) ಭೂಮಿಗೆ ಶಾಶ್ವತವಾಗಿ ಅಪಾಯಕರವಾದ ಅಥವಾ ವಿಘಾತಕವಾದ ಯಾವದೇ ಕೆಲಸವನ್ನು ಮಾಡಿದಹೊರತು

(ಕಕ) ಭೂಮಿಯಲ್ಲಿ ಒಳತುಣುಕುಗಳನ್ನು ಮಾಡಿಕೊಂಡ ಹೊರತು

(ಡ) ತಾನು ಹಿಡಿದ ಹೊಲವನ್ನು ಬೇರೆಯವರಿಗೆ ಒಳಸಾಗಿಸಿದ ಹೊರತು ಅಥವಾ ಸ್ವತಃ ಸಾಗುಮಾಡಲು ತಪ್ಪಿದ ಹೊರತು ಅಥವಾ

(ಈ) ಒಕ್ಕಲತನದ ವ್ಯತಿರಿಕ್ತ ಬೇರೆ ಕೆಲಸಕ್ಕೆ ಆ ಹೊಲವನ್ನು ಉಪಯೋಗಿಸಿದ ಹೊರತು ಅವನ ಸಂರಕ್ಷಿತ ರೈತತನದ ಹಕ್ಕು ನಷ್ಟವಾಗಲಾರದು.

3. 2ನೇ ಉಪಕಲಮಿನಲ್ಲಿ ಏನೇ ಇದ್ದರೂ ಸಂರಕ್ಷಿತ ರೈತನಾದ ಅಲ್ಪವಯಿಯ ರೈತತನದ ಹಕ್ಕು ಅವನ ವತಿಯಿಂದ ಆ ಹೊಲವು ಇತರರಿಗೆ ಒಳಸಾಗು ಆಗಿದೆಯೆಂಬ ಕಾರಣಮಾತ್ರದಿಂದ ಆ ಉಪಕಲಮಿನ ಪ್ರಕಾರ ನಷ್ಟವಾಗಲಾರದು.

**೬. ಸೀಮೆಯ ಗುರುತುಗಳನ್ನು ಕಾಪಾಡಲು ಸಂರಕ್ಷಿತ ರೈತರೇ ಹೊಣೆಗಾರರು**

೧೯೪೮ನೇ ಇಸವಿಯ ಮುಂಬಯಿ ಭೂಕಂದಾಯ ಶಾಸನದ ೧೨೩ನೇ ಕಲಮಿನಲ್ಲಿ ಏನಿದ್ದರೂ ಸಂರಕ್ಷಿತ ರೈತನು ಹಿಡಿದ ಹೊಲದ ಸೀಮೆಯ ಗುರುತುಗಳನ್ನು (ಬಾಂದು ಕಲ್ಲುಗಳನ್ನು) ಒಳ್ಳೇ ದುರಸ್ತಿಯಲ್ಲಿ ಸುರಕ್ಷಿತ ವಾಗಿಡುವ ಹೊಣೆಯು ಮತ್ತು ಇಂಥ ಬಾಂದುಕಲ್ಲುಗಳ ನಾದುರಸ್ತಿ, ಕಿತ್ತಿ ಹಾಕುವದು ಅಥವಾ ಹೆಚ್ಚುಕಡಿಮೆ ಮಾಡುವ ಇವೇ ಮೊದಲಾದ ಪ್ರಸಂಗ ಗಳಲ್ಲಿ ಕಂದಾಯಾಧಿಕಾರಿಗಳು ಸಲ್ಲಿಸಿದ ಸೇವೆಯ ಬಗ್ಗೆ ಆದ ಯೋಗ್ಯ ಖರ್ಚುವೆಚ್ಚಗಳ ಹೊಣೆಯು ಸಂರಕ್ಷಿತ ರೈತನ ಮೇಲಿರತಕ್ಕದ್ದು.

**೭.** 1. ೫ನೇ ಕಲಮಿನನಲ್ಲಿ ಏನಿದ್ದರೂ ಅದನ್ನು ಲೆಕ್ಕಿಸದೆ ಹೊಲದೊ ಡೆಯನಿಗೆ ನಿಜವಾಗಿಯೂ ಕೆಳಗೆ ಕಾಣಿಸಿದ ಉದ್ದೇಶಗಳಲ್ಲಿ ಯಾವುದೊಂದ ಕ್ಕಾದರೂ ಹೊಲವು ಬೇಕಾಗಿದ್ದರೆ ಸಂರಕ್ಷಿತ ರೈತತನವನ್ನು ಕೊನೆಗಾಣಿ ಸುವ ಕಾರಣಗಳನ್ನು ಉಲ್ಲೇಖಿಸಿ ಒಂದು ವರ್ಷ ಮುಂಚಿತವಾದ ಲೇಖೀ ನೋಟೀಸನ್ನು ರೈತನಿಗೆ ಕೊಟ್ಟು ಸಂರಕ್ಷಿತ ರೈತನ ರೈತತನವನ್ನು ಕೊನೆ ಗಾಣಿಸಬಹುದು. ಆ ಉದ್ದೇಶಗಳು ಹೀಗಿವೆ;—

(ಅ) ಸ್ವಂತ ಸಾಗುವಳಿ ಮಾಡಲೋಸುಗ. ಅಥವಾ

(ಬ) ಒಕ್ಕಲತನಕ್ಕಲ್ಲದ ಬೇರೆ ಕೆಲಸಕ್ಕಾಗಿ ಆ ಹೊಲವನ್ನು ಉಪಯೋಗಿಸುವದಕ್ಕೆ.

2. 1ನೇ ಉಪಕಲಮಿನ ಮೇರೆಗೆ ಸಂರಕ್ಷಿತ ರೈತತನವನ್ನು ಕೊನೆ ಗಾಣಿಸಿದನಂತರ ಹೊಲಮೊಡೆಯನು ಹೊಲದ ಕಬಜೆಯನ್ನು ಪಡೆದು ಕೊಂಡ ತಾರೀಖಿನಿಂದ ಒಂದು ವರ್ಷದ ಒಳಗಾಗಿ 1ನೇ ಉಪಕಲಮಿನಲ್ಲಿ ಹೇಳಿದ ಯಾವದೇ ಉದ್ದೇಶದ ಸಲುವಾಗಿ ಆ ಹೊಲವನ್ನು ಉಪಯೋಗಿ ಸಲು ತಪ್ಪಿದರೆ ಅಥವಾ ಮುಂದೆ ೧೨ ವರ್ಷಗಳೊಳಗಾಗಿ ಮೇಲೆ ಹೇಳಿದ ಉದ್ದೇಶಗಳಲ್ಲಿ ಯಾವುದೊಂದರ ಸಲುವಾಗಿ ಉಪಯೋಗಿಸುವದನ್ನು ಬಿಟ್ಟರೆ, ಯಾವ ರೈತನ ರೈತತನವು ಕೊನೆಗಾಣಿಸಲ್ಪಟ್ಟಿರುವದೊ ಆ ರೈತನಕಡೆಯಿಂದ ಅವೇ ಶರ್ತು ಕರಾರುಗಳ ಪ್ರಕಾರ ಸಾಗುವಳಿದಾರತನ ವನ್ನು ಅಂಗೀಕರಿಸಲು ನಿರಾಕರಿಸಿದ ಬಗ್ಗೆ ಲೇಖೀ ನಿರಾಕರಣವನ್ನು ತೆಗೆದುಕೊಂಡ ಹೊರತು ಅಥವಾ ಅವೇ ಕರಾರುಗಳ ಪ್ರಕಾರ ರೈತನಿಗೆ ಹೊಲವನ್ನು ಕೊಡಲು ಒಡೆಯನು ಸಿದ್ಧನಿರುವದಾಗಿ ಬರಹದ

ಮೂಲಕ ತಿಳಿಸಿದರೂ ಆ ನೋಟೀಸು ಮುಟ್ಟಿದ ಮೂರು ತಿಂಗಳುಗಳೊಳ ಗಾಗಿ ಒಡೆಯನ ಈ ಬಿನ್ನಹವನ್ನು ಒಪ್ಪಿಕೊಳ್ಳಲು ತಪ್ಪಿದ ಹೊರತು ಮೊದಲಿನ ರೈತನಿಗೆ ಕೂಡಲೆ ಹೊಲದೊಡೆಯನು ಹೊಲದ ಕಬಜೆಯನ್ನು ಪುನಃ ಕೊಡತಕ್ಕದ್ದು.

2 A. ಯಾವುದೊಂದು ಹೊಲವನ್ನು ಒಡೆಯನು ಕೌಲ ಕರಾರಿ ನಿಂದ ಸಾಗಿಸಲು ಇಚ್ಛಿಸಿದಲ್ಲಿ 1ನೇ ಉಪಕಲಮಿನ ಪ್ರಕಾರ ರೈತತನ ಕೊನೆಗಾಣಿಸಲ್ಪಟ್ಟ ರೈತರಿಗೆ ಮೊದಲು ಲೇಖಿದ ಮೂಲಕ ಅಂತಹ ಹೊಲ ಗಳ ಸಾಗುವಳಿತನವನ್ನು ಕೊಡಲು ಸಿದ್ಧನಾಗಿರುವದಾಗಿ ಒಡೆಯನು ತಿಳಿಸ ಬೇಕಲ್ಲದೆ ಕೂಡಲೆ ಮೂರು ತಿಂಗಳುಗಳೊಳಗಾಗಿ ಪರಸ್ಪರ ಒಪ್ಪಿಗೆಯುಳ್ಳ ಲಾವಣಿಗಾಗಲಿ ಇಲ್ಲವೆ ೧೨ನೇ ಕಲಮಿನ ಮೇರೆಗೆ ಗೊತ್ತುಪಡಿಸುವ ಲಾವಣಿಗಾಗಲಿ ಒಳಪಟ್ಟು ರೈತತನವನ್ನು ಒಪ್ಪಿಕೊಳ್ಳುವ ಅವರಲ್ಲಿಯ ಯಾವನೊಬ್ಬ ರೈತನಿಗೆ ಕಬಜೆಯನ್ನು ಕೊಡತಕ್ಕದ್ದು.

3. ಸ್ವಂತ ಸಾಗುವಳಿ ಮಾಡಬೇಕೆಂಬ ಕಾರಣದಿಂದ 1 ನೇ ಉಪ ಕಲಮಿನ ಪ್ರಕಾರ ರೈತತನವನ್ನು ಮುಕ್ತಾಯಗೊಳಿಸಿ ಹೊಲದ ಕಬಜೆ ಯನ್ನು ಪಡೆದುಕೊಂಡ ನಂತರ ವಿಧವೆ ಅಥವಾ ಅಲ್ಪವಯಿ, ಅಥವಾ ಶಾರೀರಿಕ ಇಲ್ಲವೆ ಮಾನಸಿಕ ದೌರ್ಬಲ್ಯವುಳ್ಳವನನ್ನು ವಾರಸದಾರನನ್ನಾಗಿ ಬಿಟ್ಟು ಮಡಿದರೆ ಆ ವಾರಸದಾರನು ಆಳುಗಳ ಮುಖಾಂತರ ಇಲ್ಲವೆ ಕೂಲಿಯವರ ಮುಖಾಂತರ ಹೊಲವನ್ನು ಸಾಗುವಮಾಡಿಸಿದರೂ ಅವಳು ಅಥವಾ ಅವನು ಸ್ವತಃ ಹೊಲಮಾಡುತ್ತಿರುವನೆಂದೇ ತಿಳಿಯತಕ್ಕದ್ದು.

4. 2 ನೇ ಉಪಕಲಮಿನ ಪ್ರಕಾರ ರೈತನು ಹೊಲದ ಕಬಜೆಯನ್ನು ಮರಳಿ ಪಡೆದಬಳಿಕ ಆ ಹೊಲವನ್ನು ತನ್ನ ರೈತತನವು ನಷ್ಟವಾಗುವ ಮುಂಚೆ ಯಾವ ಶರ್ತುಕರಾರುಗಳ ಪ್ರಕಾರ ಹಿಡಿದಿದ್ದನೋ ಅವೇ ಶರ್ತು ಕರಾರುಗಳ ಪ್ರಕಾರ ಈ ಕಾಯದೆಗೆ ಒಳಪಟ್ಟು ಹಿಡಿಯತಕ್ಕದ್ದು.

5. ಯಾವದೇ ಕಾಲಕ್ಕೆ ೧೩ ನೇ ಕಲಮಿನ ಪ್ರಕಾರ ರೈತನು ಮಾಮಲೇದಾರನ ಕಡೆಗೆ ಅರ್ಜಿಯನ್ನು ಮಾಡಿ ಹೊಲದೊಡೆಯನು 2 ನೇ ಅಥವಾ (2 A) ನೇ ಉಪಕಲಮಿನ ವ್ಯವಸ್ಥೆಗಳನ್ನು ಯೋಗ್ಯ ಕಾಲದಲ್ಲಿ ಪಾಲಿಸಲು ತಪ್ಪಿರುವನೆಂದು ಮಾಮಲೇದಾರನ ಮನವರಿಕೆ ಮಾಡಿಕೊಟ್ಟರೆ ಮಾಮಲೇದಾರನ ಆದೇಶದ ಪ್ರಕಾರ ಆ ಹೊಲದ ಕಬಜೆಯನ್ನು ಕೂಡಲೆ ಪಡೆಯಲು ರೈತನು ಹಕ್ಕುದಾರನಾಗುತ್ತಾನೆ ಮತ್ತು ರೈತನನ್ನು ಹೊರಗೆ

ಹಾಕಿದ್ದರಿಂದ ಮತ್ತು 2 ನೇ ಅಥವಾ (2 A) ನೇ ಉಪಕಲಮಿನ ಪ್ರಕಾರ ಕಬಜೆಯನ್ನು ತಿರುಗಿ ಕೊಡಲು ಒಡೆಯನು ತಪ್ಪಿದುದರಿಂದ ಆದ ಹಾನಿಯ ಬಗ್ಗೆ ಪ್ರತಿಧನವನ್ನು ಬೇಡಲು ಹಕ್ಕುದಾರನಾಗುವನು.

ಆದರೆ 1 ನೇ ಉಪಕಲಮಿನಲ್ಲಿ ನಿರ್ದಿಷ್ಟವಾದ ಯಾವದೊಂದು ಉದ್ದೇಶದ ಸಲುವಾಗಿ ನಿಜವಾಗಿಯೂ ಆ ಹೊಲವು ಒಡೆಯನಿಗೆ ಬೇಕಾಗಿ ತ್ತೆಂಬ ಬಗ್ಗೆ ಯೋಗ್ಯ ಕೋರ್ಟಿನ ತೀರ್ಪು ಆಗಿದ್ದರೆ ಆ ನಿರ್ಣಯದ ಮೇರೆಗೆ ಆದ ಹುಕುಮುನಾಮೆಯ ಪ್ರಕಾರ ಬಿಡಿಸಲ್ಪಟ್ಟ ಸಾಗುವಳಿದಾರ ಅಥವಾ ರೈತನಿಗೆ ಈ ಉಪಕಲಮಿನ ಪ್ರಕಾರ ಏನೂ ಪ್ರತಿಧನವನ್ನು ಕೊಡ ಲಾಗದು.

**೧ನೇ ಸ್ಪಷ್ಟೀಕರಣ**

೪ ನೇ ಕಲಮಿನ 1 ನೇ ಉಪಕಲಮಿನ (ಅ) ಒಳಮಾತಿನ ಕೆಳಗೆ ಬರುವ ಪ್ರಕರಣಗಳಲ್ಲಿ 'ಸದರೀ ಕಾಯಿದೆ'ಯು ಬಳಕೆಯಲ್ಲಿ ಬರುವ ಮುನ್ನ, ಮತ್ತು (ಬ) ಒಳಮಾತಿನ ಕೆಳಗೆ ಬರುವ ಪ್ರಕರಣಗಳಲ್ಲಿ ೧೯೪೬ ನೇ ಇಸವಿಯ ಮುಂಬಯಿ ಹೊಲ ಸಾಗುವಳಿ (ತಿದ್ದುಪಡೆ) ಕಾಯದೆ ಬಳಕೆ ಯಲ್ಲಿ ಬರುವ ಮೊದಲು ಸಂರಕ್ಷಿತ ರೈತನ ರೈತತನವನ್ನು ಕೊನೆಗಾಣಿಸಲು ಕೊಟ್ಟ ಯಾವದೇ ನೋಟೀಸು 1 ನೇ ಉಪಕಲಮಿನ ಉದ್ದೇಶಗಳಿಗೆ ಕಾಯದೇಶೀರ ನೋಟೀಸೆಂದು ತಿಳಿಯಕೂಡದು.

**೨ನೇ ಸ್ಪಷ್ಟೀಕರಣ**

ಈ ಕಲಮಿನ ಸಲುವಾಗಿ ರೈತನೆಂಬ ಶಬ್ದದಲ್ಲಿ ೯ ನೇ ಉಪಕಲಮಿನ ೩ ನೇ ಉಪಕಲಮಿನಲ್ಲಿ ನಿರ್ದಿಷ್ಟವಾದ ಆತನ ವಾರಸದಾರನ ಸೇರ್ಪಡೆ ಯಾಗತಕ್ಕದ್ದು.

**೮. ಸಂರಕ್ಷಿತ ರೈತನು ಮಾಡಿದ ಸುಧಾರಣೆಯ ಬಗ್ಗೆ ಪ್ರತಿಧನ**

1. ಸಾಗುವಳಿದಾರತನವನ್ನು ಕೊನೆಗಾಣಿಸುವ ನೋಟೀಸು ಅವ ನಿಗೆ ಕೊಡಲ್ಪಡುವ ಮುಂಚೆಯೆ ಸಾಗುವಳಿದಾರನೆಂಬ ನಂಟುತನದಿಂದ ಹಿಡಿದ ಹೊಲದಲ್ಲಿ ಸಂರಕ್ಷಿತ ರೈತನು ಏನಾದರೂ ಸುಧಾರಣೆಗಳನ್ನು ಮಾಡಿದ್ದರೆ ಅವನನ್ನು ಬಿಡಿಸುವ ಮೊದಲು ಆ ಸುಧಾರಣೆಗಳ ಬಗ್ಗೆ ಅವನಿಗೆ ಪ್ರತಿಧನ ದೊರೆಯತಕ್ಕದ್ದು.

2. 1 ನೇ ಉಪಕಲಮಿನ ಪ್ರಕಾರ ಸಂರಕ್ಷಿತ ರೈತನಿಗೆ ದೊರೆಯ ತಕ್ಕ ಪ್ರತಿಧನವು ಆ ಹೊಲಬಿಡಿಸುವ ಕಾಲಕ್ಕೆ ಆ ಸುಧಾರಣೆಯ ಅಂದಾಜು

ಬೆಲೆಯುಷ್ಟಿರತಕ್ಕದ್ದು. ಇಂತಹ ಕ್ರಯುವನ್ನು ಅಂದಾಜ ಮಾಡುವಾಗ ಕೆಳಗಿನ ಅಂಶಗಳನ್ನು ಗಮನಿಸತಕ್ಕದ್ದು.

(ಅ) ಆ ಸುಧಾರಣೆಯ ಮೂಲಕ ಭೂಮಿಯ ಬೆಲೆ ಎಷ್ಟರ ಮಟ್ಟಿಗೆ ಏರಿತೋ ಅಷ್ಟು ಹಣ.

(ಬ) ಸುಧಾರಣೆಯ ಸದ್ಯದ ಸ್ಥಿತಿ, ಮತ್ತು ಅದರ ಪರಿಣಾಮದ ಅಂದಾಜ ಅವಧಿ.

(ಕ) ಸುಧಾರಣೆ ಮಾಡಲಿಕ್ಕೆ ಸಾಗುವಳಿದಾರನು ವೆಚ್ಚಮಾಡಿದ ಅಥವಾ ವ್ಯವಸ್ಥೆಗೊಳಿಸಿದ ಬಂಡವಲು ಮತ್ತು ದುಡಿಮೆ; ಮತ್ತು

(ಡ) ಸುಧಾರಣೆಗೋಸ್ಕರ ಒಡೆಯನು ರೈತನಿಗೆ ತೋರಿಸಿದ ಲಾವಣಿಯ ಇಳಿತ, ಅಥವಾ ಸೂಟು ಇಲ್ಲವೆ ಇತರ ಸವಲತ್ತಿನ ಲಾಭ.

**೯. ಸಂರಕ್ಷಿತ ರೈತನ ಮರಣದ ನಂತರ ಸಾಗುವಳಿದಾರತನವನ್ನು ಮುಂದೆ ಸಾಗಿಸುವದು.**

1. ಸಂರಕ್ಷಿತ ರೈತನು ಸತ್ತರೆ ಹೊಲದೊಡೆಯನು ಆ ಹೊಲದ ಸಾಗುವಳಿದಾರತನವನ್ನು ಸಂರಕ್ಷಿತ ರೈತನ ಮರಣದ ಕಾಲಕ್ಕೆ ಇದ್ದ ಶರ್ತುಗಳ ಹಾಗೂ ಕರಾರುಗಳ ಪ್ರಕಾರ ಅಂಥ ರೈತನು ತೀರಿಕೊಂಡ ನಂತರ ನಾಲ್ಕು ತಿಂಗಳುಗಳೊಳಗಾಗಿ ಹೊಲದ ಒಡೆಯನಿಗೆ ರೈತನ ವಾರಸದಾರರಲ್ಲಿ ಯಾವನು ಆ ಹೊಲವನ್ನು ಮಾಡಲು ಒಪ್ಪಿಕೊಂಡು ಅದರಂತೆ ಬರಹದ ಮೂಲಕ ನೋಟೀಸು ಕೊಟ್ಟು ತಿಳಿಸುವನೋ ಅಂಥ ವಾರಸದಾರನಿಗೆ ಸಾಗಿಸತಕ್ಕದ್ದು.

2. 1 ನೇ ಉಪಕಲಮಿನಲ್ಲಿ ನಿರ್ದಿಷ್ಟವಾದ ಲೇಖೀ ನೋಟೀಸನ್ನು ತೀರಿಕೊಂಡ ಸಂರಕ್ಷಿತ ರೈತನ ವಾರಸದಾರರ ಪೈಕಿ ಇಬ್ಬರು ಅಥವಾ ಹೆಚ್ಚಿನ ಜನರು ಕೊಟ್ಟರೆ ಆಗ ಹೊಲದೊಡೆಯನು ಅಂಥ ವಾರಸದಾರರಲ್ಲಿ ಯಾರಿಗೆ ಮುಂದೆ ಸಾಗಿಸಬೇಕೆಂದು ಅವರೆಲ್ಲರೂ ಏಕಮತದಿಂದ ಒಪ್ಪಿಕೊಂಡು ಸಂರಕ್ಷಿತ ರೈತನು ಸತ್ತ ಬಳಿಕ ಆರು ತಿಂಗಳುಗಳೊಳಗಾಗಿ ತಿಳಿಸುವರೋ ಅಂಥವನಿಗೆ ಅದನ್ನು ಸಾಗಿಸತಕ್ಕದ್ದು. ಅಥವಾ ಇಂಥ ಒಡಂಬಡಿಕೆಯು ಈ ಅವಧಿಯಲ್ಲಿ ಹೊಲದೊಡೆಯನಿಗೆ ತಿಳಿಸಲ್ಪಡದಿದ್ದರೆ ಕಲೆಕ್ಟರನು ಹೊಲದೊಡೆಯನ ಸಲಹೆ ಪಡೆದು ಆರಿಸಿಕೊಟ್ಟ ವಾರಸದಾರನಿಗೆ ಸಾಗಿಸತಕ್ಕದ್ದು.

3. ಈ ಕಲಮಿನ ಉದ್ದೇಶವಾಗಿ ಸಂರಕ್ಷಿತ ರೈತನ ಗಂಡು

ಸಂತತಿ, ಅಥವಾ ಆತನ ದತ್ತಕ ಮಗ ಅಥವಾ ಗಂಡು ಸಂತತಿಯಾಗಲಿ ದತ್ತಕ ಮಗನಾಗಲಿ ಇರದಿದ್ದರೆ ಅವನ ವಿಧವೆ ಇವರು ಆತನ ವಾರಸದಾರರೆಂದು ತಿಳಿಯತಕ್ಕದ್ದು.

4. ಯಾವುದೊಂದು ಭೂಮಿಯು ಒಬ್ಬ ಸಂರಕ್ಷಿತ ರೈತನಿಗಿಂತ ಹೆಚ್ಚಿಗೆ ಸಂಖ್ಯೆಯ ಸಂರಕ್ಷಿತ ರೈತರಿಂದ ಕೂಡಿ ಹಿಡಿಯಲ್ಪಟ್ಟಿದ್ದರೆ ಇಂಥ ಸಂರಕ್ಷಿತ ರೈತರಲ್ಲಿ ಯಾರಾದರೂ ತೀರಿಕೊಂಡರೆ ಈ ಕಾಯದೆಯ ಕಲಮುಗಳಿಗೆ ಒಳಪಟ್ಟು ಅಂಥ ಹೊಲದ ಸಾಗುವಳಿದಾರತನವನ್ನು ಜೀವಂತವಿದ್ದ ಮತ್ತೊಬ್ಬ ಸಂರಕ್ಷಿತ ರೈತ ಅಥವಾ ರೈತರಿಗೆ ಮತ್ತು 2 ನೇ ಉಪಕಲಮಿನಲ್ಲಿ ಹೇಳಿದ ರೀತಿಯ ಪ್ರಕಾರ ನಿರ್ಧರಿಸಲ್ಪಟ್ಟ ಸತ್ತ ಸಂರಕ್ಷಿತ ರೈತನ ವಾರಸದಾರರಿಗೆ ಸಂದರ್ಭವಿದ್ದಂತೆ ಮುಂದೆ ಸಾಗಿಸತಕ್ಕದ್ದು.

**೧೦. ಹೊಲದ ಒಳವಿಭಾಗ ಮಾಡಕೂಡದು**

ಸಂರಕ್ಷಿತ ರೈತನಿಂದ ಹಿಡಿಯಲ್ಪಟ್ಟ ಭೂಮಿಯು ಯಾವದೇ ಒಳ ವಿಭಾಗವನ್ನು ಮನ್ನಿಸಲಾಗದು ಮತ್ತು ಇಂತಹ ಯಾವದೇ ಒಳ ವಿಭಾಗದಿಂದ ರೈತತನದ ಕೊನೆಯಾಗತಕ್ಕದ್ದು.

**೧೧. ಕೋರ್ಟಿನ ಕ್ರಮದ ಜಪ್ತಿ ವಿಕ್ರಿಗಳಿಗೆ ತಡೆ**

ಈ ಕಾಯದೆಯಿಂದ ಸಂರಕ್ಷಿತ ರೈತನಿಗೆ ದೊರೆತ ಹಕ್ಕುಗಳು ಯಾವದೇ ಕೋರ್ಟಿನ ಕ್ರಮದಿಂದ ಜಪ್ತಿ ವಿಕ್ರಿಗಳಿಗೆ ಪಾತ್ರವಾಗುವದಿಲ್ಲ. ಮತ್ತು ಇಂಥ ಹಕ್ಕುಗಳನ್ನು ಒತ್ತೆ, ಚಾರ್ಜ, ಮೊದಲಾದ ರೀತಿಗಳಲ್ಲಿ ಇತರರಿಗೆ ಬರೆದುಕೊಡಲು ಕಾಯದೇಶೀರ ಬರಲಾರದು.

**೧೨. ಸಮಂಜಸ (ಯೋಗ್ಯ) ಲಾವಣಿಯ ಬಗ್ಗೆ ವಿಚಾರಣೆ.**

1. ಸಂರಕ್ಷಿತ ರೈತನೆಂಬ ನಾತೆಯಿಂದ ಸಂರಕ್ಷಿತ ರೈತನಿಂದ ಧಾರಣ ಮಾಡಲ್ಪಟ್ಟ ಯಾವದೇ ಹೊಲದ ಸಮಂಜಸ ಲಾವಣಿಯನ್ನು ನಿರ್ಧರಿಸಲೋಸುಗ ಸಂರಕ್ಷಿತ ರೈತನಾಗಲಿ ಇಲ್ಲವೆ ಹೊಲದೊಡೆಯನಾಗಲಿ ತಮ್ಮ ಹೊಲವು ಯಾವ ಮಾಮಲೇದಾರನ ಅಧಿಕಾರಕ್ಷೇತ್ರದಲ್ಲಿರುವದೋ ಆ ಮಾಮಲೇದಾರನ ಕಡೆಗೆ ಬರಹದ ಮೂಲಕ ಅರ್ಜಿ ಮಾಡಿಕೊಳ್ಳತಕ್ಕದ್ದು. ಇಂಥ ಅರ್ಜಿಯು ನಿರ್ದಿಷ್ಟಮಾಡಲ್ಪಡಬಹುದಾದ ನಮೂನೆಯಲ್ಲಿ ಇರತಕ್ಕದ್ದು.

2. 1 ನೇ ಉಪಕಲಮಿನ ಕೆಳಗೆ ಬಂದ ಅರ್ಜಿಯನ್ನು ಸ್ವೀಕರಿಸಿದ ನಂತರ. ಸಂದರ್ಭವಿದ್ದಂತೆ, ಮಾಮಲೇದಾರನು ಹೊಲದೊಡೆಯನಿಗೆ ಇಲ್ಲವೆ

ಸಂರಕ್ಷಿತ ರೈತನಿಗೆ ನೋಟೀಸು ಕೊಡತಕ್ಕದ್ದು ಮತ್ತು ೧೮೭೯ ನೇ ಇಸವಿಯ ಭೂಕಂದಾಯದ ಶಾಸನದಲ್ಲಿ ಹೇಳಲ್ಪಟ್ಟ ಕ್ರಮದಂತೆ ಔಪಚಾರಿಕ ವಿಚಾರಣೆಯನ್ನು ನಡೆಸಿ ಹೊಲದ ಸಮಂಜಸ ಲಾವಣಿಯನ್ನು ನಿರ್ಧರಿಸತಕ್ಕದ್ದು.

3. 2 ನೇ ಉಪಕಲಮಿನ ಪ್ರಕಾರ ಮಾಮಲೇದಾರರು ಮಾಡಿದ ನಿರ್ಣಯದಿಂದ ಯಾರಿಗಾದರೂ ವ್ಯಸನವಾದರೆ ಅವರು ಆ ನಿರ್ಣಯದ ನಂತರ ಒಂದು ತಿಂಗಳೊಳಗಾಗಿ ಯಾರ ಅಧಿಕಾರಕ್ಷೇತ್ರದಲ್ಲಿ ಆ ಹೊಲ ವಿರುವದೋ ಆ ಒಂದನೇ ವರ್ಗದ ಸಬಾರ್ಡಿನೇಟ ಜಡ್ಜರ (ಮುನಸುಫರ) ಕಡೆಗೆ ಅಪೀಲು ಮಾಡಬಹುದು.

4. ಅಪೀಲಿನಲ್ಲಿ ಮುನಸುಫರು ತಮ್ಮ ಕಾರಣಗಳನ್ನು ಕೊಟ್ಟು ಮಾಮಲೇದಾರರ ತೀರ್ಪನ್ನು ರದ್ದುಗೊಳಿಸಬಹುದು ಅಥವಾ ತಿರುಗಿಸಬಹುದು ಅಥವಾ ತಿದ್ದುಪಡಿಗೊಳಿಸಬಹುದು, ಅಥವಾ ಅದನ್ನೇ ಗಟ್ಟಿಗೊಳಿಸಬಹುದು. ಇಲ್ಲವೆ ಅವಶ್ಯ ತೋರಿದಂತೆ ಹೆಚ್ಚಿನ ಪುರಾವೆಗಳನ್ನು ತೆಗೆದುಕೊಳ್ಳಲು ಅಥವಾ ಯಾವದೇ ಅಂಶವನ್ನು ಕುರಿತು ಹೆಚ್ಚಿಗೆ ಚೌಕಶಿಯನ್ನು ಮಾಡಲು ಆಜ್ಞಾಪಿಸಬಹುದು.

5. ಸಮಂಜಸ (ಯೋಗ್ಯ) ಲಾವಣಿಯನ್ನು ನಿರ್ಣಯಿಸುವಾಗ ೧೨ ನೇ ಕಲಮಿನ ಅಂಶಗಳಿಗೊಳಪಟ್ಟು ಕೆಳಗಿನ ಅಂಶಗಳನ್ನು ಗಮನಿಸತಕ್ಕದ್ದು:-

(ಅ) ಅದೇ ಕ್ಷೇತ್ರದಲ್ಲಿರುವ ಅಂತಹ ಉದ್ದೇಶಗಳಿಗೆ ಉಪಯೋಗಿಸುತ್ತಿರುವ ಹೊಲಗಳ ಲಾವಣಿ ಕ್ರಯ.

(ಬ) ಅದೇ ಕ್ಷೇತ್ರದಲ್ಲಿರುವ ಅದೇ ತರದ ಹೊಲಗಳ ಒಕ್ಕಲತನದ ಲಾಭಗಳು.

(ಕ) ಬೆಳೆಗಳ ಹಾಗೂ ಸರಕುಗಳ ಬೆಲೆಗಳು.

(ಡ) ಹೊಲದೊಡೆಯನು ಮಾಡಿದ ಹೊಲದ ಸುಧಾರಣೆ.

(ಈ) ಹೊಲದ ಬಗ್ಗೆ ಕೊಡಬೇಕಾದ ಭೂಕಂದಾಯ, ಮತ್ತು

(ಫ) ನಿರ್ದಿಷ್ಟ ಮಾಡಬಹುದಾದ ಇಂತಹ ಇತರ ಅಂಶಗಳು.

6. ಈ ಕಲಮಿನ ಪ್ರಕಾರ ಜರುಗತಕ್ಕ ನಡೆವಳಿಕೆಗಳಲ್ಲಿ, ೧೯೦೮ನೇ ಇಸವಿಯ ಸಿವ್ಹಿಲ್ ಪ್ರೊಸೀಜರ ಕೋಡಿನ ಪ್ರಕಾರ ದಾವೆಯ ಚೌಕಶಿಯಲ್ಲಿ ಕೆಳಗೆ ಕಾಣಿಸಿದ ವಿಷಯಗಳ ಬಗ್ಗೆ ಕೋರ್ಟುಗಳಿಗೆ ಇರುವ ಅಧಿಕಾರಗಳೇ

ಮಾಮಲೇದಾರ ಮತ್ತು ಸಬಾರ್ಡಿನೇಟ ಜಡ್ಜರಿಗೆ ಇರುತ್ತವೆ. ಅವು ಯಾವವೆಂದರೆ:—

(ಅ) ಅಫಿಡಾವಿಟ (ಪ್ರತಿಜ್ಞಾ ಲೇಖ)ದಿಂದ ಸಂಗತಿಗಳನ್ನು ಸಿದ್ಧ ಮಾಡುವದು.

(ಬ) ಯಾವನೊಬ್ಬನನ್ನು ಸಮನ್ಸ್ ಮಾಡುವದು ಮತ್ತು ಅವನು ಹಾಜರಿರುವಂತೆ ಒತ್ತಾಯಪಡಿಸುವದು ಮತ್ತು ಆಣೆ ತೆಗೆದುಕೊಳ್ಳಲಿಕ್ಕೆ ಹಚ್ಚಿ ವಿಚಾರಣೆ ಮಾಡುವದು; ಮತ್ತು

(ಕ) ಕಾಗದಪತ್ರಗಳನ್ನು ಹಾಜರಪಡಿಸಲು ಒತ್ತಾಯ ಮಾಡುವದು.

ನಿರ್ದಿಷ್ಟಪಡಿಸಬಹುದಾದ ಇತರ ಇಂತಹ ಅಧಿಕಾರಗಳು ಮಾಮಲೇದಾರ ಮತ್ತು ಮುನಸುಫರಿಗೆ ದೊರಕಬಹುದು.

7. ಈ ಕಲಮಿನ ಮೇರೆಗೆ ನಡೆದ ನಡಾವಳಿಕೆಗಳಲ್ಲಿ ಮಾಮಲೇದಾರರಾಗಲಿ ಇಲ್ಲವೆ ೧ನೇ ವರ್ಗದ ಮುನಸುಫರಾಗಲಿ ಖರ್ಚು ಕೊಡಿಸಬಹುದು. ಮತ್ತು ಇಂತಹ ಹುಕುಮು ದಿವಾಣಿ ಕೋರ್ಟಿನ ಹುಕುಮು ನಾಮೆಯೆಂದು ತಿಳಿಯಲ್ಪಟ್ಟು ಅದರಂತೆ ಬಜಾಯಿಸಲ್ಪಡಬಹುದು.

8. ಈ ಕಲಮಿನ ಪ್ರಕಾರ ಇನ್ನು ವಿಚಾರಣೆಯು ನಡೆದಿರುವ ಸಮಯದಲ್ಲಿ ಯಾವದೇ ಕಾಲಕ್ಕೆ ಸಂರಕ್ಷಿತ ರೈತನು ಪ್ರಸಂಗವಿದ್ದಂತೆ ಮಾಮಲೇದಾರರ ಅಥವಾ ೧ನೇ ವರ್ಗದ ಮುನಸುಫರ ಕಡೆಗೆ ಈ ಕಲಮಿನ ಪ್ರಕಾರ ವಿಚಾರಣೆಯು ಆರಂಭವಾಗದೆ ಹೋಗಿದ್ದರೆ ಯಾವ ಹೊಲದ ಸಮಂಜಸ ಲಾವಣಿಯು ನಿರ್ಣಯವಾಗಬೇಕಾಗಿದೆಯೋ ಆ ಹೊಲದ ಬಗ್ಗೆ ತಾನು ಕೊಡಬೇಕಾದ ಹಣದಷ್ಟು ಹಣವನ್ನು ಹಾಜರ ಪಡಿಸಬಹುದು. ಚೌಕಶಿಯು ಮುಗಿದನಂತರ ಮಾಮಲೇದಾರರಾಗಲಿ ಇಲ್ಲವೆ ಒಂದನೇ ವರ್ಗದ ಮುನಸುಫರಾಗಲಿ ಈ ಪ್ರಕಾರ ತಮ್ಮ ಕಡೆಗೆ ಹಾಜರಪಡಿಸಿದ ಹಣವನ್ನು ಅಥವಾ ಈ ಕಲಮಿನ ಪ್ರಕಾರ ಸಮಂಜಸ ಲಾವಣಿಯೆಂದು ನಿರ್ಣೀತವಾದ ಹಣದಷ್ಟು ಭಾಗವನ್ನು ಹೊಲದೊಡೆಯನಿಗೆ ಕೊಡಬೇಕೆಂದು ಮತ್ತು ಅವಶ್ಯಕವಾದ ಇತರ ಹುಕುಮನ್ನು ಮಾಡಬಹುದು.

9. ಈ ಕಲಮಿನ ಪ್ರಕಾರ ಮಾಮಲೇದಾರರಿಂದ ಮಾಡಲ್ಪಟ್ಟ ಪ್ರತಿಯೊಂದು ಹುಕುಮು, ಅದರ ವಿರುದ್ಧ ಅಪೀಲಾಗದಿದ್ದರೆ, ಮತ್ತು

ಅಪೀಲಿನಲ್ಲಿ ಹುಕುಮು ಮಾಡುವ ಅಧಿಕಾರವುಳ್ಳ ೧ನೇ ವರ್ಗದ ಮುನಸುಫ ರಿಂದ ಮಾಡಲ್ಪಟ್ಟ ಪ್ರತಿಯೊಂದು ಹುಕುಮು ಐದು ವರ್ಷಗಳ ವರೆಗೆ ಬಳಕೆಯಲ್ಲಿರತಕ್ಕದ್ದು. ಮತ್ತು ಆ ಅವಧಿಯಲ್ಲಿ ಯಾವ ಕೋರ್ಟಿನಲ್ಲಿಯೂ ಅದರ ಬಗ್ಗೆ ವಿವಾದವು ನಡೆಯಕೂಡದು.

ಆದರೆ ಮಾಮಲೇದಾರರಾಗಲಿ ಅಥವಾ ೧ನೇ ವರ್ಗದ ಮುನಸುಫ ರಾಗಲಿ, ಈ ಐದು ವರ್ಷಗಳ ಅವಧಿಯಲ್ಲಿ,

(i) ಸಂರಕ್ಷಿತ ರೈತನು ಅರ್ಜಿಮಾಡಿಕೊಂಡು ನೆರೆಹಾವಳಿ ಅಥವಾ ಇತರ ತನ್ನ ನಿಯಂತ್ರಣದ ಹೊರಗಿನ ಕಾರಣದ ಮೂಲಕ ತಾನು ಹಿಡಿದ ಹೊಲವು ಸಾಗುವಳಿಗೆ ಅಂಶತಃ ಅಥವಾ ಪೂರ್ಣ ಅಯೋಗ್ಯವಾಗಿದೆಯೆಂಬ ದನ್ನು ತೃಪ್ತಿಕರವಾದ ರೀತಿಯಲ್ಲಿ ಸಿದ್ಧಮಾಡಿಕೊಟ್ಟರೆ ಲಾವಣಿಯನ್ನು ಇಳಿಸಬಹುದು ಅಥವಾ

(ii) ಹೊಲಮೊಡೆಯನು ತನ್ನ ಖರ್ಚಿನಿಂದ ಹೊಲದಲ್ಲಿ ಸುಧಾ ರಣೆಯನ್ನು ಮಾಡಿದ್ದರಿಂದ ಹೊಲದ ಹುಟ್ಟುವಳಿಯು ಹೆಚ್ಚಾಗಿದೆಯೆಂದು ತೃಪ್ತಿಕರವಾಗಿ ಸಮಾಧಾನಪಡಿಸಿ ಅರ್ಜಿಯ ಮೂಲಕ ಬಿನ್ನವಿಸಿಕೊಂಡರೆ ಲಾವಣಿಯನ್ನು ಏರಿಸಬಹುದು.

10. ೧೮೭೦ನೇ ಇಸವಿಯ ಕೋರ್ಟ ಫೀ ಕಾಯದೆಯಲ್ಲಿ ಏನಿ ದ್ದರೂ ಈ ಕಾಯದೆಯ ಪ್ರಕಾರ ಮಾಮಲೇದಾರರ ಕಡೆಗೆ ಮತ್ತು ಅಪೀಲಿ ನಲ್ಲಿ ೧ನೇ ವರ್ಗದ ಮುನಸುಫರ ಕಡೆಗೆ ಮಾಡಿದ ಅರ್ಜಿಗೆ ನಿರ್ದಿಷ್ಟಪಡಿಸ ಬಹುದಾದ ಬೆಲೆಯ ಕೋರ್ಟ ಫೀ ಸ್ಟಾಂಪನ್ನು ಹಚ್ಚತಕ್ಕದ್ದು.

11. ಈ ಕಲಮಿನ ಪ್ರಕಾರ ನಡೆಯುವ ವಿಚಾರಣೆಗೆ ಪಕ್ಷಕಾರ ರಾದವರ ಪರವಾಗಿ ಲೇಖದ ಮೂಲಕ ಅಧಿಕಾರಪತ್ರವನ್ನು ಪಡೆದು ಯಾರು ಬೇಕಾದವರು ಹಾಜರಾಗಬಹುದು.

**೧೩. ಘೋಷಣೆ ನಿರ್ದೇಶ ಮತ್ತು ಪ್ರತಿಧನದ ಬಗ್ಗೆ ಅರ್ಜಿ**

1. (ಅ) ಯಾವದೊಂದು ಭೂಮಿಯನ್ನು ಸಾಗುಮಾಡುತ್ತಿರುವವನು ಸಾಗುವಳಿದಾರನಲ್ಲೆಂದು ೨ (ಅ) ನೇ ಕಲಮಿನ ಪ್ರಕಾರ ಘೋಷಿಸುವ ಬಗ್ಗೆ

(ಬ) ಸಾಗುವಳಿದಾರನು ಸಂರಕ್ಷಿತ ರೈತನಲ್ಲೆಂದು ೩ (ಅ) ನೇ ಕಲಮಿನ ಪ್ರಕಾರ ಘೋಷಿಸುವ ಬಗ್ಗೆ

(ಕ) ೭ ನೇ ಕಲಮಿನ 5 ನೇ ಉಪಕಲಮಿನ ಪ್ರಕಾರ ಹೊಲದ ಕಬಜೆಯನ್ನು ಪಡೆವುದಕ್ಕೆ ನಿರ್ದೇಶಮಾಡುವ ಬಗ್ಗೆ

(ಡ) ೭ ನೇ ಕಲಮಿನ 5 ನೇ ಉಪಕಲಮಿನ ಪ್ರಕಾರ ಪ್ರತಿಧನ ವನ್ನು ಕೊಡಿಸುವ ಬಗ್ಗೆ

(ಈ) ಹೊಲದಲ್ಲಿ ಮಾಡಿದ ಸುಧಾರಣೆಯ ಬಗ್ಗೆ ೮ ನೇ ಕಲಮಿನ ಪ್ರಕಾರ ಪ್ರತಿಧನವನ್ನು ನಿರ್ಣಯಿಸುವ ಬಗ್ಗೆ

ಮಾಡುವ ಅರ್ಜಿಯನ್ನು ಯಾವ ಮಾಮಲೇದಾರನ ಅಧಿಕಾರ ಕ್ಷೇತ್ರ ದಲ್ಲಿ ಹೊಲವಿರುವದೋ ಆ ಮಾಮಲೇದಾರನ ಕಡೆಗೆ ಮಾಡತಕ್ಕದ್ದು. ಇಂತಹ ಅರ್ಜಿಯನ್ನು ಗೊತ್ತುಪಡಿಸಿದ ನಮೂನೆಯಲ್ಲಿ ಮಾಡತಕ್ಕದ್ದು.

2. ಇಂಥ ಅರ್ಜಿಯು ಬಂದ ಕೂಡಲೆ ಮಾಮಲೇದಾರನು ವ್ಯವ ಹಾರ್ಯವಿದ್ದ ಮಟ್ಟಿಗೆ ೧೨ ನೇ ಕಲಮಿನಲ್ಲಿ ಹೇಳಿದ ಕ್ರಮವನ್ನನುಸರಿಸಿ ವಿಚಾರಣೆಯನ್ನು ನಡೆಸತಕ್ಕದ್ದು ಮತ್ತು (ಅ) ಅಥವಾ (ಬ) ಉಪವಾಕ್ಯ ದಲ್ಲಿ ಹೇಳಿದಂತೆ ಸಂದರ್ಭವಿದ್ದಂತೆ ಘೋಷಣೆಯನ್ನು ಮಾಡಬಹುದು ಇಲ್ಲವೆ ನಿರಾಕರಿಸಬಹುದು, (ಕ) ಉಪವಾಕ್ಯದಲ್ಲಿ ಹೇಳಿದಂತೆ 'ನಿರ್ದೇಶ ಮಾಡ ಬಹುದು, (ಡ) ಉಪವಾಕ್ಯದಲ್ಲಿ ನಿರ್ದಿಷ್ಟಪಡಿಸಿದಂತೆ ಸಾಗುವಳಿದಾರನಿಗೆ ಕೊಡತಕ್ಕ ಪ್ರತಿಧನವನ್ನು ಕೊಡಿಸಬಹುದು ಅಥವಾ (ಈ) ಉಪವಾಕ್ಯದಲ್ಲಿ ಹೇಳಿದಂತೆ ಸಾಗುವಳಿದಾರನಿಗೆ ಕೊಡಿಸತಕ್ಕ ಪ್ರತಿಧನದ ಪ್ರಮಾಣವನ್ನು ನಿರ್ಣಯಿಸಬಹುದು.

2 A. 2 ನೇ ಉಪಕಲಮಿನ ಪ್ರಕಾರ ಮಾಡಿದ ನಿರ್ಣಯಗಳಿಗೆ ಮಾಮಲೇದಾರರು ಕಾರಣಗಳನ್ನು ಬರಹದಲ್ಲಿ ಕೊಡತಕ್ಕದ್ದು.

3. 2 ನೇ ಉಪಕಲಮಿನ ಪ್ರಕಾರ ಮಾಮಲೇದಾರರು ಮಾಡಿದ ಹುಕುಮಿನಿಂದ ವ್ಯಸನಪಟ್ಟವರು ಈ ಬಗೆಯ ಹುಕುಮಿನ ವಿರುದ್ಧ ಆ ಹುಕುಮಾದ ತಾರೀಖಿನಿಂದ ೨ ತಿಂಗಳುಗಳೊಳಗಾಗಿ ಕಲೆಕ್ಟರರ ಕಡೆಗೆ ಅಪೀಲ ಮಾಡಬಹುದು. ( ಮೇಲ್ಮೊರೆಯಿಡಬಹುದು )

4. 3 ನೇ ಉಪಕಲಮಿನ ಪ್ರಕಾರ ಆಗತಕ್ಕ ಅಪೀಲಿಗೆ ಒಳಪಟ್ಟು ಮತ್ತು ೨೮ ನೇ ಕಲಮಿನ ಶರ್ತುಗಳಿಗಧೀನವಾಗಿ ೨ ನೇ ಉಪಕಲಮಿನ ಪ್ರಕಾರ ಮಾಮಲೇದಾರರು ಮಾಡಿದ ಹುಕುಮು ಕೊನೆಯದೆಂದು ತಿಳಿಯ ತಕ್ಕದ್ದು. ಕಲೆಕ್ಟರರ ಹುಕುಮು ಸಹ ೨೮ ನೇ ಕಲಮಿನ ಶರ್ತುಗಳಿಗೊಳ ಪಟ್ಟು ಕೊನೆಯದಾಗತಕ್ಕದ್ದು.

5. 2ನೇ ಉಪಕಲಮಿನ ಪ್ರಕಾರ ಮಾಡಿದ ಮಾಮಲೇದಾರನ ಹುಕುಮು ಅಥವಾ 3ನೇ ಉಪಕಲಮಿನ ಪ್ರಕಾರ ಕಲೆಕ್ಟರನು ಮಾಡಿದ

ಹುಕುಮು ದಿವಾಣಿ ಕೋರ್ಟಿನ ಹುಕುಮುನಾಮೆಯೆಂದು ತಿಳಿಯಲ್ಪಟ್ಟು ಅದರಂತೆ ಬಜಾಯಿಸಲ್ಪಡತಕ್ಕದ್ದು.

# ೩ನೇ ಪ್ರಕರಣ

**೧೩ ಅ.** ೫, ೬, ೧೦ ಮತ್ತು ೧೧ನೇ ಕಲಮುಗಳು ಎಲ್ಲ ಸಾಗುವಳಿದಾರರಿಗೂ ಅನ್ವಯಿಸತಕ್ಕದ್ದು.

**೧೪. ಎಲ್ಲ ಬಿಟ್ಟಿ ಬಿಗಾರಿಗಳು ರದ್ದು**

1. ಯಾವದೇ ಬಗೆಯ ಒಡಂಬಡಿಕೆ, ರೂಢಿ, ಅಥವಾ ಕಾಯದೆ ಏನಿದ್ದರೂ ಅವುಗಳನ್ನು ಲೆಕ್ಕಿಸದೆ ಯಾವದೇ ಹೊಲದೊಡೆಯನು ಹೊಲದ ಬಗ್ಗೆ ಶಾಸನ ಸಮ್ಮತವಾಗಿ ಬರತಕ್ಕ ಲಾವಣಿಯ ಹೊರತು ಬೇರೆ ಯಾವದೇ ಬಗೆಯ ಸುಂಕ, ಕರ, ದರ, ವೇರೋ, ಹಕ್ಕು ಅಥವಾ ಬಿಟ್ಟಿಯೂಳಿಗ ಮೊದಲಾದವುಗಳನ್ನು ರೈತನ ಕಡೆಯಿಂದ ತೆಗೆದುಕೊಳ್ಳಲು ಕಾಯದೆ ಪ್ರಕಾರ ಬರಲಾರದು.

2. 1 ನೇ ಉಪಕಲಮಿನ ವಿರುದ್ಧ ಯಾರಾದರೂ ಇಂತಹ ಸುಂಕ, ದರ, ವೇರೋ, ಹಕ್ಕು, ಕರ, ಅಥವಾ ಬಿಟ್ಟಿಯೂಳಿಗವನ್ನು ತೆಗೆದುಕೊಂಡರೆ ಅವರಿಗೆ ೧೦೦೦ ರೂ. ಗಳ ವರೆಗೆ ದಂಡವನ್ನು ವಿಧಿಸತಕ್ಕದ್ದು.

**೧೪ ಅ. ಸಮಂಜಸ ಲಾವಣಿಯು ತೀರ್ಮಾನ**

1. ಸಂರಕ್ಷಿತ ರೈತನಲ್ಲದ ಸಾಗುವಳಿದಾರನಿಂದ ಕೊಡಲ್ಪಡತಕ್ಕ ಲಾವಣಿಯು ಇಂತಹ ಸಾಗುವಳಿದಾರ ಹಾಗೂ ಆತನ ಒಡೆಯ ಪರಸ್ಪರ ಒಡಂಬಡಿಕೆಯಿಂದ ಗೊತ್ತುಪಡಿಸಿಕೊಳ್ಳುವ ಲಾವಣಿಯಾಗಿರತಕ್ಕದ್ದು. ಇಂತಹ ಒಡಂಬಡಿಕೆಯ ಪ್ರಕಾರ ಕೊಡತಕ್ಕ ಲಾವಣಿಯ ಸಮಂಜಸತೆಯ ಬಗ್ಗೆ ವಾದವಿದ್ದಲ್ಲಿ 2 ನೇ ಉಪಕಲಮಿನ ಪ್ರಕಾರ ತೀರ್ಮಾನಿಸತಕ್ಕ ಸಮಂಜಸ ಲಾವಣಿಯೇ ಕೊಡತಕ್ಕ ಲಾವಣಿಯೆಂದು ತಿಳಿಯತಕ್ಕದ್ದು.

2. 1 ನೇ ಉಪಕಲಮಿನ ಪ್ರಕಾರ ಸಮಂಜಸ ಲಾವಣಿಯನ್ನು ನಿರ್ಣಯಿಸುವದಕ್ಕೆ ಸಾಗುವಳಿದಾರನಾಗಲಿ ಇಲ್ಲವೆ ಒಡೆಯನಾಗಲಿ ಆ ಹೊಲವು ಯಾವ ಮಾಮಲೇದಾರನ ಅಧಿಕಾರ ಕ್ಷೇತ್ರದಲ್ಲಿದೆಯೋ ಆ ಮಾಮಲೇದಾರನ ಕಡೆಗೆ ಬರಹದ ಮೂಲಕ ಅರ್ಜಿ ಮಾಡಿಕೊಳ್ಳಬಹುದು.

ಇಂತಹ ಅರ್ಜಿಯು ಗೊತ್ತುಪಡಿಸಿದ ನಮೂನೆಯಲ್ಲಿರತಕ್ಕದ್ದು. ಆ ಮೇಲೆ ಶಕ್ಯವಿದ್ದ ಮಟ್ಟಿಗೆ ೧೨ ನೇ ಕಲಮಿನ 2 ರಿಂದ 11ರ ವರೆಗಿನ ಉಪಕಲಮು ಗಳಲ್ಲಿಯ ಏರ್ಪಾಡುಗಳೆಲ್ಲ ಅನ್ವಯಿಸತಕ್ಕದ್ದು.

**೧೫. ಲಾವಣಿಯ ಪರಮಾವಧಿ ಪ್ರಮಾಣವನ್ನು ಗೊತ್ತುಪಡಿಸಲು ಸರಕಾರದ ಅಧಿಕಾರ**

1. ಪ್ರಕಟನೆಯಲ್ಲಿ ನಿರ್ದಿಷ್ಟಪಡಿಸಿದ ಕ್ಷೇತ್ರಗಳಲ್ಲಿರುವ ಹೊಲಗಳ ಬಗ್ಗೆ ರೈತರು ಕೊಡಬೇಕಾದ ಲಾವಣಿಯ ಪರಮಾವಧಿ ಪ್ರಮಾಣವನ್ನು ಪ್ರಾಂತಿಕ ಸರಕಾರವು ಕಾಲಕಾಲಕ್ಕೆ ಸರಕಾರೀ ಗಜೆಟ್ಟಿನಲ್ಲಿ ಪ್ರಕಟನೆಯ ಮೂಲಕ ಗೊತ್ತುಪಡಿಸಬಹುದು. ಆದರೆ ನೀರಾವರಿ ಭೂಮಿಗಳ ವಿಷಯ ದಲ್ಲಿ ಲಾವಣಿಯ ಪರಮಾವಧಿ ದರವು ಗೊತ್ತುಪಡಿಸಿದ ರೀತಿಯಲ್ಲಿ ನಿರ್ಣಯಿಸಿದ ಬೆಳೆಯ ಅಥವಾ ಅದರ ಬೆಲೆಯ ಒಂದು ನಾಲ್ಕಾಂಶವನ್ನು ಮತ್ತು ಇತರ ಭೂಮಿಗಳ ವಿಷಯದಲ್ಲಿ ಬೆಳೆಯ ಅಥವಾ ಆದರ ಬೆಲೆಯ ಒಂದು ಮೂರಾಂಶವನ್ನು ಮೀರಕೂಡದು.

2. ಯಾವದೇ ಒಡಂಬಡಿಕೆ, ರೂಢಿ, ಕೋರ್ಟಿನ ಹುಕುಮು ಅಥವಾ ಹುಕುಮುನಾಮೆಗಳೇನಿದ್ದರೂ ಇಂಥ ಪ್ರಕಟನೆಯಲ್ಲಿ ಹೇಳಿದ ಕ್ಷೇತ್ರದಲ್ಲಿಯ ಇಂಥ ಹೊಲದ ಬಗ್ಗೆ ಗೊತ್ತುಪಡಿಸಿದ ಲಾವಣಿ ದರವನ್ನು ಮೀರಿ ಹೆಚ್ಚಿನ ದರದ ಪ್ರಕಾರ ರೈತನ ಕಡೆಯಿಂದ ಲಾವಣಿಯನ್ನು ವಸೂಲ ಮಾಡಲು ಹೊಲದೊಡೆಯನಿಗೆ ಬರಲಾರದು.

3. ಇಂತಹ ಪ್ರತಿಯೊಂದು ಪ್ರಕಟನೆಯು ಪ್ರಾಂತಿಕ ಶಾಸನ ಮಂಡಲದ ಪ್ರತಿಯೊಂದು ಮನೆಯಲ್ಲಿಡಲ್ಪಡತಕ್ಕದ್ದು ಮತ್ತು ಮುಂದಿನ ಅಧಿವೇಶನದಲ್ಲಿ ಈ ಮನೆಗಳೆರಡೂ ಒಪ್ಪಿಕೊಂಡು ಮಾಡಿದ ನಿರ್ಣಯದ ಪ್ರಕಾರ ಆ ಪ್ರಕಟನೆಯು ರದ್ದಾಗಬಹುದು ಅಥವಾ ಹೆಚ್ಚುಕಡಿಮೆಯಾಗ ಬಹುದು.

**೧೫ ಅ.** 1. ಸರಕಾರೀ ಗಜೆಟ್ಟಿನಲ್ಲಿ ಪ್ರಾಂತಿಕ ಸರಕಾರವು ಕಾಲಕಾಲಕ್ಕೆ ಪ್ರಕಟನೆಯ ಮೂಲಕ ಪ್ರಕಟನೆಯು ಅನ್ವಯಿಸುವ ಯಾವದೇ ಪ್ರದೇಶ ದಲ್ಲಿ ಪೂರ್ಣ ಅಥವಾ ಅಂಶತಃ ಬೆಳೆಯ ಕೋರು ಪಾಲಿನ ರೂಪದಲ್ಲಿ ಕೊಡತಕ್ಕ ಲಾವಣಿಗಳೆಲ್ಲ ಪ್ರಕಟನೆಯ ತಾರೀಖಿನಿಂದ ಆರು ತಿಂಗಳಿಗಿಂತ ಮುಂಚಿತವಲ್ಲದ ನಿರ್ದಿಷ್ಟ ತಾರೀಖಿನಿಂದ ಗೊತ್ತುಪಡಿಸಿದ ರೀತಿಯಲ್ಲಿ ನಗದು ರೂಪಕ್ಕೆ ತಿರುಗಿಸಲ್ಪಡತಕ್ಕದ್ದು.

2. ಯಾವದೇ ಒಡಂಬಡಿಕೆ, ರೂಢಿ, ಹುಕುಮುನಾಮೆ ಅಥವಾ ಕೋರ್ಟಿನ ಹುಕುಮು ಇಲ್ಲವೆ ೧೫ನೇ ಕಲಮಿನ ಪ್ರಕಾರ ಪ್ರಾಂತಿಕ ಸರಕಾರವು ಮಾಡಿದ ಹುಕುಮುಗಳೇನಿದ್ದರೂ ಅವುಗಳನ್ನು ಲೆಕ್ಕಿಸದೆ 1ನೇ ಉಪಕಲಮಿನ ಪ್ರಕಾರ ಪ್ರಕಟನೆ ಹೊರಟ ಪ್ರದೇಶದಲ್ಲಿಯ ಯಾವನೇ ಒಡೆಯನು 1ನೇ ಉಪಕಲಮಿನ ಪ್ರಕಾರ ಹೊರಡಿಸಿದ ಪ್ರಕಟನೆಯಲ್ಲಿ ನಿರ್ದಿಷ್ಟಪಡಿಸಿದ ತಾರೀಖಿನ ನಂತರ ರೂಪಾಂತರ ಹೊಂದಿದ ನಗದು ಹಣಕ್ಕಿಂತ ಹೆಚ್ಚಿಗಾಗಲಿ ಇಲ್ಲವೆ ಬೆಳೆಯ ಕೋರುಪಾಲಿನಿಂದಾಗಲಿ ಲಾವಣಿಯನ್ನು ವಸೂಲ ಮಾಡತಕ್ಕದ್ದಲ್ಲ.

3. ಯಾವನೇ ಒಡೆಯನು ಬೆಳೆಯ ಕೋರುಪಾಲಿನ ರೂಪದಲ್ಲಾಗಲಿ ಇಲ್ಲವೆ ನಗದು ರೂಪಾಂತರಹೊಂದಿದ ಹಣಕ್ಕಿಂತ ಹೆಚ್ಚಿಗಾಗಲಿ ಯಾವದೇ ಲಾವಣಿಯನ್ನು ವಸೂಲ ಮಾಡಿದರೆ ೧೦೦೦ ರೂಪಾಯಿಗಳವರೆಗೆ ದಂಡಕ್ಕೆ ಗುರಿಯಾಗುವನು.

4. 1ನೇ ಉಪಕಲಮಿನ ಪ್ರಕಾರವಿದ್ದ ಪ್ರತಿಯೊಂದು ಪ್ರಕಟನೆಯು ಪ್ರಾಂತಿಕ ಶಾಸನ ಮಂಡಲದ ಪ್ರತಿಯೊಂದು ಮನೆಯಲ್ಲಿ ಇಡಲ್ಪಡತಕ್ಕದ್ದು ಮತ್ತು ಎರಡೂ ಮನೆಗಳಿಂದ ಅದರ ಮುಂದಿನ ಅಧಿವೇಶನದಲ್ಲಿ ಅಂಗೀಕೃತವಾದ ಗೊತ್ತುವಳಿಯಿಂದ ರದ್ದುಗೊಳಿಸಲ್ಪಡಬಹುದು ಅಥವಾ ಹೆಚ್ಚುಕಡಿಮೆ ಮಾಡಲ್ಪಡಬಹುದು.

### ೧೭. ಲಾವಣಿಯ ಸೂಟಿ ಮತ್ತು ತಹಕೂಪಗಳು

1. ೧೮೭೯ ನೇ ಇಸವಿಯ ಮುಂಬಯಿ ಭೂಕಂದಾಯ ಶಾಸನದ ೮೮ (ಅ) ಕಲಮಿನಲ್ಲಿ ಏನಿದ್ದರೂ, ಯಾವದೇ ಕಾರಣದಿಂದ ಹೊಲದ ಒಡೆಯನು ಯಾವದೇ ಹೊಲದ ಬಗ್ಗೆ ಸರಕಾರಕ್ಕೆ ತೆರಬೇಕಾದ ಇಡೀ ಭೂ-ಕಂದಾಯವು ತಹಕೂಪ ಅಥವಾ ಸೂಟಾದರೆ, ಆ ಹೊಲದೊಡೆಯನು ತನ್ನ ರೈತನಿಂದ ಇಂಥ ಹೊಲದ ಬಗ್ಗೆ ತನಗೆ ಬರಬೇಕಾದ ಲಾವಣಿಯ ವಸೂಲಿಯನ್ನು ತಹಕೂಪ ಅಥವಾ ಸೂಟಮಾಡತಕ್ಕದ್ದು. ಇಂಥ ಹೊಲದ ವಿಷಯದಲ್ಲಿ ಭೂಕಂದಾಯವು ಅಂಶತಃ ತಹಕೂಪ ಅಥವಾ ಸೂಟಾಗಿದ್ದರೆ ಅದೇ ಪ್ರಮಾಣದಲ್ಲಿ ಆ ಹೊಲದ ರೈತನಿಂದ ಬರತಕ್ಕ ಲಾವಣಿಯಲ್ಲಿ ತಹಕೂಪ ಅಥವಾ ಸೂಟ ಮಾಡತಕ್ಕದ್ದು.

ಆದರೆ ಬೆಳೆಯ ಪಾಲಿನ ರೂಪದಿಂದ ಬರತಕ್ಕ ಲಾವಣಿಯನ್ನು ಅಥವಾ

ಅದರ ಭಾಗವನ್ನು ಹೊಲದೊಡೆಯನು ತಹಕೂಪ ಅಥವಾ ಸೂಟ ಮಾಡ ಲಿಕ್ಕೆ ಬದ್ಧನಾಗಲಾರನು.

2. ಯಾವದೊಂದು ಹೊಲದ ಬಗ್ಗೆ ಸರಕಾರಕ್ಕೆ ಭೂಕಂದಾಯವು ಸಲ್ಲತಕ್ಕದ್ದಿಲ್ಲವೋ ಅಂಥ ಹೊಲದ ಬಗ್ಗೆ, ಆ ಹೊಲದ ನೆರೆಹೊರೆಯಲ್ಲಿರುವ ಯಾವದೇ ಹೊಲದ ಬಗ್ಗೆ ತೆರಬೇಕಾದ ಕಂದಾಯವನ್ನು ಯಾವದೇ ಕಾರಣದಿಂದ ಸರಕಾರವು ತಹಕೂಪ ಅಥವಾ ಸೂಟ ಮಾಡಿದರೆ ಸರಕಾರದ ಸಾಮಾನ್ಯ ಅಥವಾ ವಿಶಿಷ್ಟ ಹುಕುಮುಗಳಿಗೊಳಪಟ್ಟು ಕಲೆಕ್ಟರ ಸಾಹೇಬರು ೧ ನೇ ಉಪಕಲಮಿನಲ್ಲಿ ಹೇಳಿದ ರೀತಿಯಂತೆ ಅಂಥ ಹೊಲದ ವಿಷಯವಾಗಿ ಒಡೆಯನಿಗೆ ಸಲ್ಲತಕ್ಕ ಲಾವಣಿಯನ್ನಾಗಲಿ ಅಥವಾ ಅದರಲ್ಲಿಯ ಕೆಲಭಾಗ ವನ್ನಾಗಲಿ ತಹಕೂಪ ಅಥವಾ ಸೂಟಮಾಡತಕ್ಕದ್ದು.

3. ಈ ಕಲಮಿನ ಪ್ರಕಾರ ಲಾವಣಿ ತಹಕೂಪಾದ ಅವಧಿಯಲ್ಲಿ ಅಥವಾ ಸೂಟಾದ ಲಾವಣಿಯ ವಸೂಲಿಯ ಸಲುವಾಗಿ ಹೊಲದೊಡೆಯನಿಗೆ ದಾವೆಯನ್ನು ಮಾಡಲಿಕ್ಕೆ ಅಥವಾ ದಿವಾಣಿಕೋರ್ಟಿನ ಹುಕುಮುನಾಮೆಯ ಅಮಲಬಜಾವಣಿ ಮಾಡಲಿಕ್ಕೆ ಬರಲಾರದು. ೧೮೭೯ ನೇ ಇಸವಿಯ ಮುಂಬಯಿ ಭೂಕಂದಾಯ ಕಾಯದೆಯ ೮೬ ಮತ್ತು ೮೭ ನೇ ಕಲಮುಗಳ ಪ್ರಕಾರ ಮದತಿ ( ಸಹಾಯ ) ಅರ್ಜಿಯನ್ನು ಹಿಡಿಯಲಿಕ್ಕೆ ಬರಲಾರದು. ಈ ಕಲಮಿನ ಪ್ರಕಾರ ಲಾವಣಿಯ ವಸೂಲಿಯು ತಹಕೂಪಾದ ಅವಧಿ ಯನ್ನು ಇಂಥ ಲಾವಣಿಯ ವಸೂಲಿಯ ಬಗ್ಗೆ ನಡೆಯುವ ಯಾವದೇ ದಾವೆ ಅಥವಾ ವಿಚಾರಣೆಯ ಸಲುವಾಗಿ ಗೊತ್ತುಪಡಿಸಿದ ಮುದ್ದತಿ ಅವಧಿಯನ್ನು ಲೆಕ್ಕಹಾಕುವಾಗ ಲೆಕ್ಕಹಿಡಿಯದೆ ಬಿಡತಕ್ಕದ್ದು.

4. ೧೮೭೯ ನೇ ಇಸವಿಯ ಮುಂಬಯಿ ಭೂಕಂದಾಯ ಶಾಸನದ ೮೬ ಮತ್ತು ೮೭ ನೇ ಕಲಮುಗಳಲ್ಲಿ ಏನಿದ್ದರೂ, ಅದೇ ಕಾಯದೆಯ ೮೭ ನೇ ಕಲಮಿನ ೨ ನೇ ಉಪಕಲಮಿನ ಕೆಳಗೆ ಹುಕುಮು ಮಾಡುವಾಗ ಕಲೆಕ್ಟರ ಸಾಹೇಬರು ಹೊಲದೊಡೆಯನಿಗೆ ನೆರವು ಕೊಡುವದಕ್ಕೋಸುಗ ಈ ಕಾಯದೆಯ ೧ ನೇ ಅಥವಾ ೨ ನೇ ಉಪಕಲಮಿನ ಪ್ರಕಾರ ಅಥವಾ ಭೂಕಂದಾಯ ಶಾಸನದ ೮೪ (ಅ) ಕಲಮಿನ ಪ್ರಕಾರ ಸೂಟಾಗತಕ್ಕ ಹಣವನ್ನು ಕಳೆದ ಬಳಿಕ ರೈತನು ಕೊಡತಕ್ಕ ಲಾವಣಿಗಿಂತ ಹೆಚ್ಚಿಗೆ ಒಡೆಯನಿಗೆ ಏನಾದರೂ ಕೊಟ್ಟಿದ್ದರೆ ಆ ಹಣದ ಮಟ್ಟಿಗೆ ಮೇಳಹಾಕಲು ರೈತನಿಗೆ ಅನುಮತಿಯನ್ನು ಕೊಡತಕ್ಕದ್ದು. ಸದರೀ ಕೋಡಿನ ೮೬ ನೇ

ಕಲಮಿನ ಪ್ರಕಾರ ಮಾಡಿದ ಅರ್ಜಿಯ ತಾರೀಖಿನಿಂದ ಹಿಂದೆ ೩ ವರ್ಷಗಳ ಅವಧಿಯಲ್ಲಿ ಅಂಥ ಒಡೆಯನಿಗೆ ರೈತನು ಕೊಟ್ಟ ಹಣದ ಬಗ್ಗೆ ಮಾತ್ರ ಈ ಉಪಕಲಮಿನ ಕೆಳಗೆ ಸೆಟಆಫ (ಮೇಳಹಾಕುವದು) ಮಾಡಲು ಬರುತ್ತದೆ.

**೧೬ ಅ.** ಈ ಕಾಯದೆಯಲ್ಲಿ ಅಥವಾ ಆ ಕಾಲಕ್ಕೆ ಬಳಿಕೆಯಲ್ಲಿದ್ದ ಇತರ ಯಾವದೇ ಕಾಯದೆಯಲ್ಲಿ ಅಥವಾ ಒಡಂಬಡಿಕೆ, ರೂಢಿ ಏನಿದ್ದರೂ ಸರಕಾರದ ಸೈನ್ಯ ಶಾಖೆ, ಹಡಗುಪಡೆ, ವೈಮಾನಿಕ ದಲದಲ್ಲಿದ್ದವನಿಗೆ ಸಾಗು ಮಾಡಲ್ಪಟ್ಟ ಹೊಲವು ಬೇರೊಬ್ಬನಿಗೆ ಒಳಸಾಗುವಳಿ ಮಾಡಲ್ಪಟ್ಟಿದೆಯೆಂಬ ಒಂದೇಕಾರಣದಿಂದ ಆತನ ಸಂರಕ್ಷಿತರೈತತನವನ್ನು ನಷ್ಟಗೊಳಿಸಲಾರದು.

**೧೭. ಇರುವ ಮನೆಯಿಂದ ಹೊರಗೆ ಹಾಕಲು ಪ್ರತಿಬಂಧ**

1. ಯಾವದೇ ಗ್ರಾಮದಲ್ಲಿ ರೈತನು ತನ್ನ ಖರ್ಚಿನಿಂದ ಅಥವಾ ತನ್ನ ಪೂರ್ವಜರಿಂದ ಕಟ್ಟಿಸಿದ ಮನೆಯಲ್ಲಿ ತಾನು ಇರುತ್ತಿದ್ದರೆ ಅಂಥ ರೈತನನ್ನು ಅಂಥ ಮನೆಯಿಂದ (ಅಂದರೆ ಸಾಮಾನು, ಸ್ಥಳ ಮತ್ತು ಅದರ ಉಪಭೋಗಕ್ಕೆ ಅವಶ್ಯಕವಾದ ಮತ್ತು ಅದಕ್ಕೆ ಹೊಂದಿದ ಜಾಗೆ ಸಹಿತ) ಕೆಳಗಿನ ಸಂದರ್ಭಗಳನ್ನು ಹೊರತು ಪಡಿಸಿ ಉಳಿದ ಪ್ರಸಂಗಗಳಲ್ಲಿ ಒಡೆಯನಿಗೆ ಹೊರಗೆ ಹಾಕಲು ಬರಲಾರದು.

(ಅ) ಒಡೆಯನು ರೈತನಾಗಲಿ ಅಥವಾ ಅವನ ಪೂರ್ವಜರಾಗಲಿ ತಮ್ಮ ಖರ್ಚಿನಿಂದ ಆ ಮನೆಯನ್ನು ಕಟ್ಟಿಲ್ಲವೆಂದು ಸಿದ್ಧಮಾಡಿಕೊಟ್ಟ ಹೊರತು

(ಬ) ಸದರೀ ಜಾಗೆಯ ಕಬಜೆ ಮತ್ತು ಉಪಯೋಗದ ಬಗ್ಗೆ ಕೊಡುತ್ತಬಂದ ಬಾಡಿಗೆಯನ್ನು ಕೊಡಲು ಬಾಡಿಗೆದಾರ-ರೈತನು ತಪ್ಪಿದ ಹೊರತು.

2. 1 ನೇ ಉಪಕಲಮಿನ ಯೋಜನೆಗಳು ೭ನೇ ಕಲಮಿನ ಒಂದನೇ ಉಪಕಲಮಿನ ಕೆಳಗೆ ಯಾವ ಹೊಲದಿಂದ ರೈತನು ಹೊರಗೆ ಹಾಕಲ್ಪಟ್ಟಿರುವನೋ ಅಂಥ ಒಕ್ಕಲತನದ ಸಲುವಾಗಿ ಉಪಯೋಗಿಸಲ್ಪಡುತ್ತಿದ್ದ ಹೊಲದಲ್ಲಿರುವ ಮನೆಗೆ ಮಾತ್ರ ಹತ್ತುವದಿಲ್ಲ.

**೧೮. ಮನೆ ಕಟ್ಟಿಸಿದ ಸ್ಥಳವನ್ನು ಕೊಂಡುಕೊಳ್ಳುವ ಪ್ರಥಮ ಸವಲತ್ತನ್ನು ರೈತನಿಗೆ ಕೊಡುವದು**

1. ೧೭ ನೇ ಕಲಮಿನಲ್ಲಿ ಹೇಳಲ್ಪಟ್ಟ ಸ್ಥಳವನ್ನು ಒಡೆಯನು ಆ

ಸ್ಥಳವನ್ನು ಮಾರಬೇಕೆಂದು ಬಯಸಿದರೆ ಅಂಥ ಸ್ಥಳದ ಮೇಲೆ ಬಾಡಿಗೆದಾರ ರೈತನು ತನ್ನ ಅಥವಾ ತನ್ನ ಪೂರ್ವಜರ ಖರ್ಚಿನಿಂದ ಮನೆಯನ್ನು ಕಟ್ಟಿಸಿಕೊಂಡಿದ್ದರೆ ಮಾಮಲೇದಾರರು ಇಲ್ಲಿ ವ್ಯವಸ್ಥೆ ಮಾಡಿದ ರೀತಿಯಂತೆ ನಿರ್ಧರಿಸಿದ ಬೆಲೆಗೆ ಅದನ್ನು ಕೊಳ್ಳಲಿಕ್ಕೆ ೨ನೇ ಉಪಕಲಮಿನಲ್ಲಿ ಹೇಳಿದ ಪ್ರಕಾರ ಅವನಿಗೆ ಮೊದಲಹಕ್ಕನ್ನು ಕೊಡಲಾಗುವದು.

2. ಆ ಸ್ಥಳವನ್ನು ಮಾರಲಿಚ್ಛಿಸುವ ಒಡೆಯನು ಬಾಡಿಗೆದಾರನಿಗೆ ಒಂದು ಲೇಖೀ ನೋಟೀಸು ಕೊಡತಕ್ಕದ್ದು. ಮತ್ತು ಅದರಲ್ಲಿ ಬಾಡಿಗೆ ದಾರನು ಆ ಸ್ಥಳವನ್ನು ಕೊಳ್ಳಲಿಚ್ಛಿಸುವನೋ ಅಥವಾ ಇಲ್ಲವೋ ಎಂಬದನ್ನು ಮೂರು ತಿಂಗಳ ಅವಧಿಯಲ್ಲಿ ತಿಳಿಸತಕ್ಕದ್ದೆಂದು ಉಲ್ಲೇಖವಿರತಕ್ಕದ್ದು.

3. ೩ ತಿಂಗಳೊಳಗಾಗಿ ಬಾಡಿಗೆದಾರನು ಲೇಖಿ ಮೂಲಕ ಒಡೆಯ ನಿಗೆ ಆ ಸ್ಥಳವನ್ನು ಕೊಳ್ಳುವ ಬಗ್ಗೆ ತನ್ನ ಒಪ್ಪಿಗೆಯುಂಟೆಂದು ತಿಳಿಸಿದರೆ ಒಡೆಯನು ಕೂಡಲೇ ಮಾಮಲೇದಾರರ ಕಡೆಗೆ ಆ ಸ್ಥಳದ ಬೆಲೆಯನ್ನು ನಿರ್ಧರಿಸುವ ಕುರಿತು ಅರ್ಜಿ ಮಾಡತಕ್ಕದ್ದು. ಇಂಥ ಅರ್ಜಿಯು ಬಂದ ಬಳಿಕ ಮಾಮಲೇದಾರರು ಬಾಡಿಗೆದಾರನಿಗೆ ನೋಟೀಸು ಮಾಡಿ ಮತ್ತು ಔಪಚಾರಿಕ ವಿಚಾರಣೆ ನಡೆಸಿ ಸ್ಥಳದ ಬೆಲೆಯನ್ನು ನಿರ್ಧರಿಸತಕ್ಕದ್ದು. ಇಂಥ ಸ್ಥಳದ ಬೆಲೆಯ ಹಣವನ್ನು ಮಾಮಲೇದಾರರು ಒಮ್ಮೆ ನಿರ್ಣಯಿ ಸಿದ ಬಳಿಕ ಅದು ಈ ಕಾಯದೆಗೊಳಪಟ್ಟು ಕೊನೆಯ ನಿರ್ಧಾರವಾಗುವದು. ಈ ಬಗೆಯ ಹುಕುಮು ಆದ ೩ ತಿಂಗಳಲ್ಲಿ ಆ ಹಣವನ್ನು ತಮ್ಮ ಕಡೆಗೆ ಹಾಜರ ಮಾಡಬೇಕೆಂದು ಲೇಖೀ ಆಜ್ಞೆಯ ಮೂಲಕ ಮಾಮಲೇದಾರರು ವಿಧಿಸಬಹುದು. ಈ ಪ್ರಕಾರ ಹಣವು ಹಾಜರಾದ ಬಳಿಕ ಆ ಸ್ಥಳವು ಬಾಡಿಗೆದಾರನ ವಶಕ್ಕೆ ವರ್ಗಾಯಿಸಲ್ಪಟ್ಟಿತೆಂದು ತಿಳಿಯತಕ್ಕದ್ದು. ಮತ್ತು ಹಾಜರಾದ ಹಣವನ್ನು ಒಡೆಯನಿಗೆ ಕೊಡತಕ್ಕದ್ದು. ಗೊತ್ತುಪಡಿಸಿದ ಫೀ ಕೊಟ್ಟಮೇಲೆ ಮಾಮಲೇದಾರರು ಆ ಬಾಡಿಗೆದಾರನಿಗೆ ವರ್ಗಾಯಿಸಲ್ಪಟ್ಟ ಸ್ಥಳದ ನಿರ್ದೇಶಮಾಡಿ ಅವನಿಗೊಂದು ನಿರ್ದಿಷ್ಟ ನಮೂನೆಯಲ್ಲಿ ಸರ್ಟಿ-ಫಿಕೇಟನ್ನು ಕೊಡತಕ್ಕದ್ದು ಮತ್ತು ಅದರಲ್ಲಿ ಬಾಡಿಗೆದಾರನ ಹೆಸರಿನ ಉಲ್ಲೇಖವಿರತಕ್ಕದ್ದು.

4. ೩ನೇ ಉಪಕಲಮಿನಲ್ಲಿ ನಿರ್ದಿಷ್ಟವಾದ ಅವಧಿಯೊಳಗಾಗಿ ಬಾಡಿಗೆದಾರ ರೈತನು ಆ ಸ್ಥಳವನ್ನು ಕೊಳ್ಳುವ ತನ್ನ ಇಚ್ಛೆ ಮತ್ತು

ಒಪ್ಪಿಗೆಯನ್ನು ತಿಳಿಸದಿದ್ದರೆ ಅಥವಾ ೩ನೇ ಉಪಕಲಮಿನಲ್ಲಿ ಹೇಳಿದ ಅವಧಿಯೊಳಗಾಗಿ ಅದರ ಕಿಮ್ಮತ್ತಿನ ಹಣವನ್ನು ಹಾಜರಪಡಿಸದೆ ಹೋದರೆ ಆ ಸ್ಥಳವನ್ನು ಕೊಳ್ಳಲು ತನಗಿರುವ ಪ್ರಥಮ ಹಕ್ಕಿನ ಅಧಿಕಾರವನ್ನು ರೈತನು ಬಿಟ್ಟುಕೊಟ್ಟಿರುವನೆಂದು ತಿಳಿಯತಕ್ಕದ್ದು ಮತ್ತು ೩ನೇ ಉಪಕಲಮಿನಲ್ಲಿ ಹೇಳಿದ ಪ್ರಕಾರ ವಿಚಾರಣೆಯನ್ನು ನಡೆಸಿದ ಬಳಿಕ ಮಾಮಲೇದಾರರು ಗೊತ್ತುಪಡಿಸುವ ಆ ಕಟ್ಟಡದ ಕಿಮ್ಮತ್ತಿನ ವಿಷಯಕವಾದ ನಷ್ಟಪರಿಹಾರ ದ್ರವ್ಯವನ್ನು ಕೊಟ್ಟಬಳಿಕ ಹೊಲದೊಡೆಯನಿಗೆ ಆ ರೈತನನ್ನು ಹೊರಗೆ ಹಾಕಲಿಕ್ಕೆ ಹಕ್ಕುಂಟಾಗುತ್ತದೆ. ೨೮ನೇ ಕಲಮಿನ ವ್ಯವಸ್ಥೆಗೊಳಪಟ್ಟು ನಷ್ಟಪರಿಹಾರ ದ್ರವ್ಯದ ಬಗ್ಗೆ ಮಾಮಲೇದಾರರ ನಿರ್ಣಯವೇ ಕೊನೆಯದಾಗತಕ್ಕದ್ದು.

5. ಈ ಕಲಮಿನ ವಿರುದ್ಧ ಮಾಡಿದ ಯಾವದೇ ಸ್ಥಳದ ಮಾರಾಟವು ರದ್ದ ಬಾತಲವಾಗುವದು.

**೧೯. ರೈತನು ಹಚ್ಚಿದ ಗಿಡಗಳ ವಿಷಯದಲ್ಲಿ ಅವನಿಗಿರುವ ಹಕ್ಕು**

1. ಸಂರಕ್ಷಿತ ರೈತನಾಗಲಿ ಇಲ್ಲವೆ ಯಾವ ರೈತನೇ ಆಗಲಿ ಈ ಕಾಯದೆಯು ಬಳಕೆಯಲ್ಲಿ ಬರುವ ಮೊದಲು ಅಥವಾ ಹಿಂದುಗಡೆ ತನಗೆ ಸಾಗುಮಾಡಲ್ಪಟ್ಟ ಹೊಲದಲ್ಲಿ ಏನಾದರೂ ಗಿಡಗಳನ್ನು ಹಚ್ಚಿದ್ದರೆ ಅಥವಾ ಹಚ್ಚಿದರೆ ಅಂಥ ಸಾಗುವಳಿತನವು ಇರುವ ಅವಧಿಯಲ್ಲಿ ಆ ಗಿಡಗಳ ಉತ್ಪನ್ನಕ್ಕೆ ಹಾಗೂ ಅವುಗಳ ಕಟ್ಟಿಗೆ ಕಾವಲುಗಳಿಗೆ ಆತನು ಹಕ್ಕುದಾರನಾಗುತ್ತಾನೆ. ಮತ್ತು ರೈತತನವು ಮುಗಿದ ಮೇಲೆ ೧೮ನೇ ಕಲಮಿನ ೩ನೇ ಉಪಕಲಮಿನಲ್ಲಿ ಹೇಳಿದ ಪ್ರಕಾರ ಮಾಮಲೇದಾರರು ಚೌಕಶಿಯನ್ನು ಮಾಡಿ ಆ ಗಿಡಗಳ ಬಗ್ಗೆ ರೈತನಿಗೆ ಸಲ್ಲತಕ್ಕ ಪ್ರತಿಧನವನ್ನು ನಿರ್ಣಯಿಸಿದ ನಂತರ ಆ ಹಣಕ್ಕೆ ರೈತನು ಹಕ್ಕುದಾರನಾಗುತ್ತಾನೆ.

ಆದರೆ ರೈತನು ತಾನಾಗಿಯೇ ತನ್ನ ರೈತತನದ ಹಕ್ಕನ್ನು ಹೊಲದೊಡೆಯನಿಗೆ ಬಿಟ್ಟುಕೊಟ್ಟಿದ್ದರೆ ಈ ಉಪಕಲಮಿನ ಪ್ರಕಾರ ದೊರೆಯಬೇಕಾದ ಪ್ರತಿಧನವನ್ನು ಬೇಡಲು ಅವನಿಗೆ ಅಧಿಕಾರವು ಹುಟ್ಟುವದಿಲ್ಲ.

ಆದರೆ ಮತ್ತು ಸಾಗುವಳಿದಾರತನವು ಪ್ರಚಲಿತವಿದ್ದ ಕಾಲದಲ್ಲಿ ಹೊಲದ ಒಡೆಯನು, ಗಿಡಗಳನ್ನು ರೈತನು ಹಚ್ಚಿರದಿದ್ದಂತೆ, ಲಾವಣಿಗೆ ಮಾತ್ರ ಹಕ್ಕುದಾರನಾಗುವನು.

2. ೧ನೇ ಉಪಕಲಮಿನ ಪ್ರಕಾರ ಮಾಮಲೇದಾರರು ಕೊಟ್ಟ

ನಿರ್ಣಯದಿಂದ ಯಾರಿಗಾದರೂ ವ್ಯಸನವಾದರೆ ಅಂಥ ನಿರ್ಣಯವಾದ ೨ ತಿಂಗಳೊಳಗಾಗಿ ಕಲೆಕ್ಟರ ಸಾಹೇಬರ ಕಡೆಗೆ ಅದರ ವಿರುದ್ಧ ಅಪೀಲ ಮಾಡಬಹುದು. (ಮೇಲ್ಮೊರೆಯಿಡಬಹುದು.)

3. ೧ನೇ ಉಪಕಲಮಿನ ಪ್ರಕಾರ ಆದ ಮಾಮಲೇದಾರರ ಹುಕುಂ ೨ನೇ ಉಪಕಲಮಿನ ಪ್ರಕಾರ ಹಾಗೂ ೨೮ನೇ ಕಲಮಿನ, ವ್ಯವಸ್ಥೆಯಂತೆ ಕಲೆಕ್ಟರ ಕಡೆಗಿದ್ದ ಅಪೀಲಿಗಧೀನವಾಗಿ, ಕೊನೆಯ ಹುಕುಮಾಗಿರತಕ್ಕದ್ದು.

4. ೨೮ ನೇ ಕಲಮಿನಲ್ಲಿಯ ಏರ್ಪಾಡಿಗೊಳಪಟ್ಟು ೨ ನೇ ಉಪ ಕಲಮಿನ ಮೇರೆಗೆ ಕಲೆಕ್ಟರರು ಮಾಡುವ ಹುಕುಮು ಕೂಡ ಕೊನೆಯ ದಾಗಿರತಕ್ಕದ್ದು.

5. ೧ ನೇ ಉಪಕಲಮಿನ ಪ್ರಕಾರ ಮಾಮಲೇದಾರರು ಮಾಡಿದ ಯಾವದೇ ಹುಕುಮು ಅಥವಾ ೨ ನೇ ಉಪಕಲಮಿನ ಮೇರೆಗೆ ಕಲೆಕ್ಟರರು ಮಾಡಿದ ಹುಕುಮು ದಿವಾಣಿ ಕೋರ್ಟಿನ ಹುಕುಮನಾಮೆಯೆಂದು ಭಾವಿಸ ಲ್ಪಡತಕ್ಕದ್ದು. ಮತ್ತು ಅದರಂತೆ ಅವುಗಳ ಅಮಲಬಜಾವಣಿಯಾಗ ತಕ್ಕದ್ದು.

## ೨೦. ಲಾವಣಿ ಕೊಡದಿದ್ದುದಕ್ಕೆ ರೈತತನ ಕೊನೆಗೊಂಡ ಬಗ್ಗೆ ಪರಿಹಾರ

ಯಾವನೇ ರೈತನಿಂದ ಹಿಡಿಯಲ್ಪಟ್ಟ ಯಾವದೇ ಹೊಲದ ಯಾವದೇ ರೈತತನವು ಲಾವಣಿ ಹಣವನ್ನು ಕೊಡಲಾರದುದಕ್ಕೆ ಕೊನೆಗಾಣಿಸಲ್ಪಟ್ಟರೆ ಮತ್ತು ಸಾಗುವಳಿದಾರರನ್ನು ಹೊರಗೆ ಹಾಕಲು ಯಾವದೇ ಕ್ರಮವನ್ನಾಗಲಿ ಇಲ್ಲವೆ ದಾವೆಯನ್ನಾಗಲಿ ಒಡೆಯನು ಮಾಡಿದರೆ ದಾವೆಯ ಅಥವಾ ಇತರ ಕಾಯದೇಶೀರ ಕ್ರಮದ ಖರ್ಚು ವೆಚ್ಚಸಹಿತ ಲಾವಣಿಯ ಬಾಕಿಯನ್ನು ಒಡೆಯನಿಗೆ ಕೊಡಲು ರೈತನಿಗೆ ಹೇಳತಕ್ಕದ್ದು ಅಥವಾ ೧೫ ದಿವಸಗಳಲ್ಲಿ ಹಣವನ್ನು ಕೊಡುವ ಬಗ್ಗೆ ತನಗೆ ಸರಿಕಂಡ ಜಾಮೀನನ್ನು ಕೊಡಲಿಕ್ಕೆ ಹೇಳಬಹುದು; ಮತ್ತು ೧೫ ದಿವಸಗಳಲ್ಲಿ ಕೋರ್ಟಿನ ಈ ನಿರ್ದೇಶವನ್ನು ಸಾಗುವಳಿದಾರನು ಪಾಲಿಸಿದರೆ ಕೋರ್ಟು ಆ ರೈತನನ್ನು ಹೊರಗೆ ಹಾಕುವ ಬಗ್ಗೆ ಹುಕುಮು ಮಾಡುವದರ ಅಥವಾ ಹುಕುಮನಾಮೆಯನ್ನು ಮಾಡು ವದರ ಬದಲು ಸಾಗುವಳಿದಾರತನವು ನಷ್ಟವಾಗಿಲ್ಲೆಂದು ನಿರ್ದೇಶಿಸುವ ಹುಕುಮನ್ನು ಮಾಡತಕ್ಕದ್ದು ಮತ್ತು ಆ ಬಳಿಕ ಸಾಗುವಳಿದಾರನು ರೈತ ತನವು ನಷ್ಟವಾಗದಿದ್ದಂತೆ ಆ ಹೊಲವನ್ನು ಹಿಡಿಯತಕ್ಕದ್ದು.

ಆದರೆ ೫ ನೇ ಕಲಮಿನ 2 ನೇ ಉಪಕಲಮಿನ (ಬ) ಉಪವಾಕ್ಯದಲ್ಲಿ ನಿರ್ದಿಷ್ಟವಾದ ಅವಧಿಯೊಳಗಾಗಿ ಲಾವಣಿಯನ್ನು ಕೊಡಲು ಯಾವದೇ ಮೂರುವರ್ಷಗಳ ವರೆಗೆ ತಪ್ಪಿದಲ್ಲಿ ಲಾವಣಿ ಕೊಡಲಾರದುದಕ್ಕೆ ರೈತತನ ಕೊನೆಗಂಡಂತಹ ಸಾಗುವಳಿದಾರನಿಗೆ ಈ ಕಲಮಿನಲ್ಲಿಯದಾವದೂ ಹತ್ತುವದಿಲ್ಲ.

**೨೧. ಬೇರೆ ಕೆಲ ಸಂದರ್ಭಗಳಲ್ಲಿ ಪರಿಹಾರ**

ಯಾವದೇ ರೈತನಿಂದ ಹಿಡಿಯಲ್ಪಟ್ಟ ಹೊಲದ ಸಾಗುವಳಿದಾರತನದ ಹಕ್ಕು ಆ ಹೊಲಕ್ಕೆ ಶಾಶ್ವತವಾದ ಅಪಾಯವನ್ನುಂಟು ಮಾಡಿರುವನೆಂಬ ಕಾರಣದಿಂದ ಕೊನೆಗಂಡರೆ ಹೊಲದೊಡೆಯನು ರೈತನಿಗೆ ಲೇಖೀ ನೋಟೀಸು ಕೊಟ್ಟು ಅದರಲ್ಲಿ ರೈತನು ಹೊಲಕ್ಕೆ ಮಾಡಿದ ಶಾಶ್ವತ ಅಪಾಯವನ್ನಾಗಲಿ ಅಥವಾ ಇತರ ನಷ್ಟವನ್ನಾಗಲಿ ಉಲ್ಲೇಖಿಸಿದ ಬಳಿಕ ೧ ವರ್ಷದೊಳಗಾಗಿ ಆ ಹೊಲವನ್ನು ಅಪಾಯಕ್ಕಿಂತ ಮೊದಲಿನ ಸ್ಥಿತಿಗೆ ಒಯ್ಯಲು ರೈತನು ತಪ್ಪಿದ ಹೊರತು ಅಂಥ ರೈತನ ವಿರುದ್ಧ ಹೊಲಬಿಡಿಸುವ ಬಗ್ಗೆ ಯಾವದೇ ವ್ಯವಹಾರವನ್ನಾಗಲಿ ದಾವೆಯನ್ನಾಗಲಿ ಮಾಡಲಿಕ್ಕೆ ಬರಲಾರದು.

**೨೨. ಲಾವಣಿಯ ಬಗ್ಗೆ ಪಾವತಿ**

1. ತದ್ವಿರುದ್ಧವಾದ ಲೇಖೀ ತಿಳಿವಳಿಕೆಯಿಲ್ಲದಿದ್ದ ಪಕ್ಷದಲ್ಲಿ, ಒಡೆಯನ ಕಡೆಗೆ ರೈತನು ಕೊಟ್ಟ ಪ್ರತಿಯೊಂದು ರಕಮು ಅಂಥ ಹಣವು ಕೊಡಲ್ಪಟ್ಟ ವರ್ಷದ ಬಗ್ಗೆ ರೈತನು ಕೊಡಬೇಕಾದ ಲಾವಣಿಯ ಲೆಕ್ಕಕ್ಕೆ ಸಲ್ಲಿಸಿದ ಹಣವೇ ಅದೆಂದು ತಿಳಿಯತಕ್ಕದ್ದು.

2. ಗೊತ್ತುಪಡಿಸಿದ ರೀತಿ ಮತ್ತು ನಮೂನೆಯಲ್ಲಿ ಪ್ರತಿಯೊಬ್ಬ ಹೊಲದೊಡೆಯನು ತಾನು ರೈತನ ಕಡೆಯಿಂದ ಸ್ವೀಕರಿಸಿದ ಲಾವಣಿ ಹಣದ ಬಗ್ಗೆ ಲೇಖೀ ಪಾವತಿಯನ್ನು ಕೊಡತಕ್ಕದ್ದು.

3. ಹೀಗೆ ಸ್ವೀಕರಿಸಲ್ಪಟ್ಟ ಹಣದಬಗ್ಗೆ ಯಾರಾದರೂ ಲೇಖೀ ಪಾವತಿಯನ್ನು ಕೊಡಲು ತಪ್ಪಿದರೆ ಆ ಆಪಾದನೆಯು ಸಿದ್ಧವಾದ ಬಳಿಕ ೧೦೦ ರೂಪಾಯಿಗಳ ವರೆಗೆ ದಂಡಕ್ಕೆ ಗುರಿಯಾಗುವರು.

**೨೩. ಹತ್ತು ವರ್ಷಗಳಿಂತ ಕಡಿಮೆ ಅವಧಿಯ ಲಾವಣಿಪತ್ರಗಳಿಲ್ಲ; ಮತ್ತು ಪ್ರತಿಯೊಂದು ಕಬುಲಾಯತಿಯು ೧೦ ವರ್ಷಗಳದೆಂದು ತಿಳಿಯತಕ್ಕದ್ದು.**

1. (ಅ) ಈ ಕಲಮು ಬಳಕೆಯಲ್ಲಿ ಬಂದನಂತರ ಈ ಕಲಮು

ಬಳಕೆಯಲ್ಲಿ ಬಂದ ಪ್ರದೇಶದಲ್ಲಿದ್ದ ಯಾವದೇ ಹೊಲದ ಕಬುಲಾಯತಿಯು ೧೦ ವರ್ಷಗಳಿಗಿಂತ ಕಡಿಮೆ ಅವಧಿಯ ಬಗ್ಗೆ ಇರಕೂಡದು ; ಮತ್ತು

(ಬ) ಸದರೀ ತಾರೀಖಿನ ದಿನ ಜಾರಿಯಲ್ಲಿದ್ದ ಪ್ರತಿಯೊಂದು ಕಬುಲಾಯತಿಯು ಅಥವಾ ಯಾವದೇ ಹೊಲದ ಬಗ್ಗೆ ಸದರೀ ತಾರೀಖಿನ ನಂತರ ಬರೆದು ಕೊಟ್ಟ ಕಬುಲಾಯತಿಯು ೧೦ ವರ್ಷಗಳಿಗಿಂತ ಕಡಿಮೆ ಅವಧಿಯ ಬಗ್ಗೆ ಇರುವದಿಲ್ಲೆಂದು ತಿಳಿಯಲ್ಪಡತಕ್ಕದ್ದು.

2. ಯಾವದೇ ಒಡಂಬಡಿಕೆ, ರೂಢಿ ಅಥವಾ ಇದಕ್ಕೆ ವಿರುದ್ಧವಾದ ಕಾಯದೆ ಏನಿದ್ದರೂ ಅದನ್ನು ಲೆಕ್ಕಿಸದೆ 1 ನೇ ಉಪಕಲಮಿನ (ಬ) ಉಪವಾಕ್ಯದಲ್ಲಿ ಹೇಳಿದಂತಹ ಯಾವದೇ ಕಬುಲಾಯತಿಯು ಕಬುಲಾಯತಿಯ ಅವಧಿ ಮುಗಿದಿದೆಯೆಂಬ ಒಂದೇ ಕಾರಣದಿಂದ ಹತ್ತು ವರ್ಷಗಳು ಪೂರ್ಣ ಮುಗಿಯುವ ಮುನ್ನ ಕೊನೆಗೊಳಿಸಲ್ಪಡಕೂಡದು.

ಆದರೆ 1 ನೇ ಉಪಕಲಮಿನ (ಬ) ಉಪವಾಕ್ಯದಲ್ಲಿ ಹೇಳಿದಂತಹ ಕಬುಲಾಯತಿಯು ರೈತನಿಂದ ಹತ್ತುವರ್ಷಗಳ ಅವಧಿ ಪೂರ್ಣವಾಗುವ ಮೊದಲು ಕಬುಲಾಯತಿಪತ್ರವನ್ನು ಒಪ್ಪಿಸಿಕೊಟ್ಟು ಕೊನೆಗಾಣಿಸಲ್ಪಡಬಹುದು.

3. 1ನೇ ಅಥವಾ 2ನೇ ಉಪಕಲಮಿನ ಏರ್ಪಾಡುಗಳಿಗೆ ವಿರುದ್ಧವಾಗಿ ವರ್ತಿಸುವ ಯಾವನೇ ಹೊಲದೊಡೆಯನು ದೋಷಿಯೆಂದು ಸಿದ್ಧವಾದ ನಂತರ ೧೦೦೦ ರೂ ಗಳ ವರೆಗೆ ದಂಡಕ್ಕೆ ಪಾತ್ರನಾಗುವನು.

**೨೪. ಕಬಜೆಯನ್ನು ಪಡೆಯುವ ಕ್ರಮ**

1. ಈ ಕಾಯದೆಯ ಪ್ರಕಾರ ಯಾವದೇ ಹೊಲದ ಅಥವಾ ವಾಸಿಸುವ ಮನೆಯ ಕಬಜೆಗೆ ಪಾತ್ರನಾದ ಸಾಗುವಳಿದಾರನು ಅಂಥ ಕಬಜೆಯ ಸಲುವಾಗಿ ಯಾವ ಮಾಮಲೇದಾರನ ಅಧಿಕಾರ ಕ್ಷೇತ್ರದಲ್ಲಿ ಆ ಹೊಲ ಅಥವಾ ಮನೆಯಿರುವದೋ ಆ ಮಾಮಲೇದಾರನ ಕಡೆಗೆ ಗೊತ್ತುಪಡಿಸಿದ ನಮೂನೆಯಲ್ಲಿ ಲೇಖೀ ಅರ್ಜಿಯನ್ನು ಮಾಡಿಕೊಳ್ಳತಕ್ಕದ್ದು.

1A. ಸಾಗುವಳಿದಾರನಿಂದ ಹಿಡಿಯಲ್ಪಟ್ಟ ಯಾವದೇ ಹೊಲದ ಕಬಜೆಯನ್ನು ಮಾಮಲೇದಾರನ ಆಜ್ಞೆಯಿಲ್ಲದೆ ಯಾವನೇ ಒಡೆಯನು ಪಡೆದುಕೊಳ್ಳಲಾಗದು. ಇಂತಹ ಹುಕುಮನ್ನು ಪಡೆಯಲು ಗೊತ್ತುಪಡಿಸಿದ ನಮೂನೆಯಲ್ಲಿ ಅರ್ಜಿಯನ್ನು ಅವನು ಮಾಡಿಕೊಳ್ಳತಕ್ಕದ್ದು.

2. 1 ಅಥವಾ 1Aನೇ ಉಪಕಲಮಿನ ಪ್ರಕಾರ ಅರ್ಜಿ ಬಂದಬಳಿಕ

ಮಾಮಲೇದಾರನು ಗೊತ್ತುಪಡಿಸಿದ ರೀತಿಯಲ್ಲಿ ವಿಚಾರಣೆಯನ್ನು ನಡೆಸಿ ತನಗೆ ಯೋಗ್ಯ ಕಂಡ ಹುಕುಮನ್ನು ಮಾಡತಕ್ಕದ್ದು.

3. 2 ನೇ ಉಪಕಲಮಿನ ಪ್ರಕಾರ ಮಾಮಲೇದಾರನು ಮಾಡಿದ ಹುಕುಮಿನ ವಿರುದ್ಧ ಆ ಹುಕುಮು ಆದ ೩ ತಿಂಗಳುಗಳೊಳಗಾಗಿ ಕಲೆಕ್ಟರನ ಕಡೆಗೆ ಅಪೀಲು ಮಾಡಲು ಬರುವದು.

4. ೨೪ ನೇ ಕಲಮಿನ ಏರ್ಪಾಡಿಗಧೀನವಾಗಿ, 3 ನೇ ಉಪಕಲಮಿನ ಪ್ರಕಾರ ಆದ ಅಪೀಲಿನಲ್ಲಿ ಕಲೆಕ್ಟರನಿಂದ ಹೆಚ್ಚುಕಡಿಮೆ ಮಾಡಲ್ಪಟ್ಟ ಹೊರತು 2 ನೇ ಉಪಕಲಮಿನ ಪ್ರಕಾರ ಮಾಡಲ್ಪಟ್ಟ ಮಾಮಲೇದಾರನ ಹುಕುಮು ಮತ್ತು 3 ನೇ ಉಪಕಲಮಿನ ಪ್ರಕಾರ ಕಲೆಕ್ಟರನು ಮಾಡಿದ ಪ್ರತಿಯೊಂದು ಹುಕುಮು ಕೊನೆಯದೆಂದು ತಿಳಿಯತಕ್ಕದ್ದು.

5. ಮಾಮಲೇದಾರನಿಂದ 2 ನೇ ಉಪಕಲಮಿನ ಪ್ರಕಾರ ಮಾಡಲ್ಪಟ್ಟ ಹುಕುಮು ಮತ್ತು ಕಲೆಕ್ಟರನಿಂದ 3 ನೇ ಉಪಕಲಮಿನ ಪ್ರಕಾರ ಮಾಡಲ್ಪಟ್ಟ ಹುಕುಮು ದಿವಾಣಿ ಕೋರ್ಟಿನ ಹುಕುಮುನಾಮೆಗಳೆಂದು ತಿಳಿಯತಕ್ಕದ್ದು ಮತ್ತು ಅದರಂತೆ ಅವುಗಳ ಜಾರಿಯಾಗತಕ್ಕದ್ದು (ಅಮಲಬಜಾವಣೆಯಾಗತಕ್ಕದ್ದು.)

**೨೫. ಕೆಲವು ಅಪವಾದಗಳು**

ಈ ಕಾಯದೆಯಲ್ಲಿಯ ಯಾವ ವ್ಯವಸ್ಥೆಯೂ

1. ಸಾರ್ವಭೌಮರ ಕಡೆಯಿಂದ ಇಲ್ಲವೆ ಸಹಕಾರೀ ಸಂಘಗಳ ಕಡೆಯಿಂದ ಸಾಗುವಳಿಗೆ ರೈತರಿಂದ ಹಿಡಿಯಲ್ಪಟ್ಟ ಹೊಲಗಳಿಗೆ ಅಥವಾ

2. ಯಾವದೊಂದು ಔದ್ಯೋಗಿಕ ಅಥವಾ ವಾಣಿಜ್ಯ ವಿಷಯಕ ವ್ಯವಹಾರದ ಲಾಭದ ಸಲುವಾಗಿ ಲಾವಣಿಯಿಂದ ಹಿಡಿಯಲ್ಪಟ್ಟ ಹೊಲಕ್ಕೆ ಅನ್ವಯಿಸುವದಿಲ್ಲ.

**೨೬. ಇತರ ಕಾಯದೆಗಳ ಪ್ರಕಾರವಿದ್ದ ಹಕ್ಕುಗಳಿಗೆ ಈ ಕಾಯದೆಯಿಂದ ಭಾಧಕವಿಲ್ಲ**

ಅಮಲಿನಲ್ಲಿದ್ದ ಯಾವದೇ ಕಾಯದೆ ಅಥವಾ ರೂಢಿಯಿಂದಾಗಲೀ ಕರಾರ, ಕಾಣಿಕೆ, ಹುಕುಂನಾಮೆ ಅಥವಾ ಕೋರ್ಟಿನ ಹುಕುಮು ಇವುಗಳಿಂದಾಗಲೀ ಅಥವಾ ಎರಡನೇ ಯಾವತರದಿಂದಾಗಲೀ ರೈತನಿಗೆ ಇರತಕ್ಕ ಹಕ್ಕುಗಳಿಗೆ ಈ ಕಾಯದೆಯಿಂದ ಬಾಧೆಬರಲಾರದಂತೆ ಅರ್ಥ ಮಾಡಬೇಕು.

**೨೭. ನಿಯಮಗಳನ್ನು ಮಾಡುವ ಅಧಿಕಾರ**

1. ಈ ಕಾಯದೆಯ ಉದ್ದೇಶಗಳನ್ನು ಈಡೇರಿಸುವದಕ್ಕೋಸುಗ ಪ್ರಾಂತಿಕ ಸರಕಾರವು ನಿಯಮಗಳನ್ನು ಮಾಡಬಹುದು.

2. ವಿಶೇಷತಃ ಮತ್ತು ಹಿಂದೆ ಹೇಳಿದ ವ್ಯವಸ್ಥೆಯಲ್ಲಿಯ ಸಾಮಾನ್ಯ ಸ್ವರೂಪಕ್ಕೆ ಅಬಾಧಕವಾದ ರೀತಿಯಲ್ಲಿ ಈ ನಿಯಮಗಳಲ್ಲಿ ಕೆಳಗಿನ ವಿಷಯ ಗಳನ್ನು ಕುರಿತು ವ್ಯವಸ್ಥೆಯನ್ನು ಮಾಡಬಹುದು.

(ಅ) ಲಾವಣಿಯೆಂದು ಹೊಲದೊಡೆಯನಿಗೆ ಕೊಡತಕ್ಕ ಬೆಳೆಯ ಕೋರುಪಾಲಿನ ರೀತಿಯನ್ನು ಗೊತ್ತುಹಚ್ಚುವದು.

(ಬ) ೨ (ಅ) ನೇ ಕಲಮಿನ 1ನೇ ಉಪಕಲಮಿನ ಪ್ರಕಾರ ಘೋಷ ಣೆಯ ಬಗ್ಗೆ ಮಾಡತಕ್ಕ ಅರ್ಜಿಯ ನಮೂನೆ.

(ಕ) ಸಾಗುವಳಿದಾರನು ಸಂರಕ್ಷಿತ ರೈತನಲ್ಲೆಂದು ೩ (ಅ) ನೇ ಕಲಮಿನ 1ನೇ ಉಪಕಲಮಿನ ಪ್ರಕಾರ ಘೋಷಣೆಯ ಬಗ್ಗೆ ಮಾಡತಕ್ಕ ಅರ್ಜಿಯ ನಮೂನೆ.

(ಡ) ಮಾಮಲೇದಾರನ ಕಡೆಗೆ ಮಾಡತಕ್ಕ ಅರ್ಜಿಗೆ ಅಥವಾ ಸಿವಿಲ್ ಜಡ್ಜ (ಸೀನಿಯರ ಡಿವಿಜನ್) ಇವರ ಕಡೆಗೆ ೧೨ನೇ ಕಲಮಿನ ಪ್ರಕಾರ ಮಾಡಿಕೊಳ್ಳತಕ್ಕ ಅಪೀಲಿಗೆ ಕೊಡಬೇಕಾಗುವ ಕೋರ್ಟ ಫೀ ಸ್ಟಾಂಪಿನ ಬೆಲೆಯು ಕುರಿತು.

(ಈ) ೧೨ನೇ ಕಲಮಿನ ಪ್ರಕಾರ ಸಮಂಜಸ ಲಾವಣಿಯನ್ನು ನಿರ್ಣಯಿಸುವದಕ್ಕೆ ವಿಚಾರಿಸತಕ್ಕ ಇತರ ಅಂಶಗಳು.

(ಫ) ೧೩ನೇ ಕಲಮಿನ 1ನೇ ಉಪಕಲಮಿನ (ಅ) ಮತ್ತು (ಬ) ಉಪವಾಕ್ಯಗಳ ಪ್ರಕಾರ ಮಾಡತಕ್ಕ ಘೋಷಣೆಗಳ ಬಗ್ಗೆ ಅರ್ಜಿಯ ನಮೂನೆ, (ಕ) ಉಪವಾಕ್ಯದ ಪ್ರಕಾರ ಮಾಡಬೇಕಾದ ನಿರ್ದೇಶದ ಬಗ್ಗೆ ಅರ್ಜಿಯ ನಮೂನೆ, ಮತ್ತು (ಡ) ಅಥವಾ (ಈ) ಉಪವಾಕ್ಯಗಳ ಮೇರೆಗೆ ಮಾಡತಕ್ಕ ಪ್ರತಿಧನದ ಕೊಡುಗೆ ಹಾಗೂ ಪ್ರಮಾಣ ನಿರ್ಣಯದ ಬಗ್ಗೆ ಅರ್ಜಿಯ ನಮೂನೆ.

(ಗ) ೧೪ (ಅ) ನೇ ಕಲಮಿನ 2ನೇ ಉಪಕಲಮಿನ ಪ್ರಕಾರ ಸಮಂಜಸ ಲಾವಣಿಯನ್ನು ನಿರ್ಣಯಿಸುವದಕ್ಕೆ ಬೇಕಾಗುವ ಅರ್ಜಿಯ ನಮೂನೆ.

(ಹ) ೧೫ನೇ ಕಲಮಿನ 1ನೇ ಉಪಕಲಮಿಗಿದ್ದ ಹೆಚ್ಚಿನ ವಾಕ್ಯದ

ಉದ್ದೇಶಗಳ ಸಲುವಾಗಿ ಬೆಳೆಯ ಬೆಲೆಯನ್ನು ನಿರ್ಣಯಿಸುವ ರೀತಿ.

(ಇ) ೧೫ (ಅ) ನೇ ಕಲಮಿನ 1ನೇ ಉಪಕಲಮಿನ ಪ್ರಕಾರ ಕೋರುಪಾಲು ಲಾವಣಿಯನ್ನು ನಗದಿಗೆ ರೂಪಾಂತರಿಸುವ ರೀತಿ.

(ಜ) ೧೮ನೇ ಕಲಮಿನ ೩ನೇ ಉಪಕಲಮಿನ ಪ್ರಕಾರ ಕೊಡತಕ್ಕ ಸರ್ಟಿಫಿಕೇಟಿನ ನಮೂನೆ ಮತ್ತು ಅದರ ಬಗ್ಗೆ ಕೊಡತಕ್ಕ ಫೀ (ಶುಲ್ಕ).

(ಕ) ೨೨ನೇ ಕಲಮಿನ ಪ್ರಕಾರ ಒಡೆಯನು ರೈತನಿಗೆ ಕೊಡಬೇಕಾದ ಪಾವತಿಯ ನಮೂನೆ ಮತ್ತು ಅದರ ರೀತಿ.

(ಲ) ೨೮ನೇ ಕಲಮಿನ ಪ್ರಕಾರ ಹೊಲದ ಅಥವಾ ವಾಸಿಸುವ ಮನೆಯ ಕಬಜೆ ಪಡೆಯಲು ಅರ್ಜಿಯ ನಮೂನೆ ಮತ್ತು ವಿಚಾರಣೆಯನ್ನು ಮಾಡುವ ರೀತಿ.

(ಮ) ಕಾಯದೆಯ ಪ್ರಕಾರ ಗೊತ್ತುಪಡಿಸಿದ ಅಥವಾ ಗೊತ್ತುಪಡಿಸಬಹುದಾದ ಇತರ ಯಾವದೇ ವಿಷಯ.

3. ಈ ಕಲಮಿನ ಪ್ರಕಾರ ಮಾಡಲ್ಪಟ್ಟ ನಿಯಮಗಳನ್ನು ಸರಕಾರೀ ಗಜೆಟ್ಟಿನಲ್ಲಿ ಮೊದಲು ಪ್ರಕಟಿಸತಕ್ಕದ್ದು.

**೨೮. ಕಲೆಕ್ಟರರ ಮೇಲೆ ಪ್ರಾಂತಿಕ ಸರಕಾರದ ಅಧಿಕಾರ**

೧೨ನೇ ಕಲಮಿನಲ್ಲಿ ಹೇಳಿದ ಪ್ರಸಂಗಗಳನ್ನು ಹೊರತುಪಡಿಸಿ, ಈ ಕಾಯದೆಗೆ ಸಂಬಂಧಿಸಿದ ಇತರ ಎಲ್ಲ ವಿಷಯಗಳಲ್ಲಿ ಕಲೆಕ್ಟರರ ಮೇಲೆ ಪ್ರಾಂತಿಕ ಸರಕಾರಕ್ಕೆ ಸಾಮಾನ್ಯ ಹಾಗೂ ಕಂದಾಯ ಖಾತೆಗಳ ಆಡಳಿತದಲ್ಲಿ ಇರುವ ಅಧಿಕಾರ ಹಾಗೂ ನಿಯಂತ್ರಣಗಳು ಇದ್ದೇ ಇರುತ್ತವೆ.

**೨೮ ಅ.** ಸರಕಾರೀ ಗಜೆಟ್ಟನಲ್ಲಿ ಪ್ರಕಟನೆಯ ಮೂಲಕ ಹಾಕುವ ನಿರ್ಬಂಧ ಹಾಗೂ ಶರ್ತುಗಳಿಗೊಳಪಟ್ಟು ಪ್ರಾಂತಿಕ ಸರಕಾರವು ಈ ಕಾಯದೆಯಿಂದ ತನಗಿದ್ದ ಎಲ್ಲ ಅಥವಾ ಯಾವದೇ ಅಧಿಕಾರವನ್ನು ಅಸಿಸ್ಟಂಟ ಅಥವಾ ಡೆಪ್ಯೂಟಿ ಕಲೆಕ್ಟರ ತರಗತಿಗಿಂತ ಕಡಿಮೆಯಲ್ಲದ ತನ್ನ ಯಾವದೇ ಅಧಿಕಾರಿಗೆ ಒಪ್ಪಿಸಿಕೊಡಬಹುದು.

**೨೯. ಸಣ್ಣ ಹಿಡುವಳಿದಾರ ಕಾಯದೆಯ ೯ ನೇ ಕಲಮಿನ ಕೊನೆ**

ಈ ಕಾಯದೆಯು ಬಳಕೆಯಲ್ಲಿ ಬರುವ ತಾರೀಖಿನಿಂದ ಮುಂಬಯಿ ಸ್ಮಾಲ ಹೋಲ್ಡರ ರಿಲೀಫ ಆಕ್ಟ ೧೯೩೮ ರ ೯ ನೇ ಕಲಮು ಆ ಕಾಯದೆಯ ೧ ನೇ ಕಲಮಿನ ೩ ನೇ ಉಪಕಲಮಿನಲ್ಲಿ ಏನು ಹೇಳಿದ್ದರೂ, ರದ್ದು ಮಾಡಲ್ಪಟ್ಟಿದೆಯೆಂದು ತಿಳಿಯತಕ್ಕದ್ದು.

ಆದರೆ, ಸದರೀ ಕಾಯದೆಯ ೧೧ ನೇ ಕಲಮಿನಲ್ಲಿ ಉಲ್ಲೇಖಿಸಿದ ಯಾವ ಹಕ್ಕು, ಅಧಿಕಾರ, ಹೊಣೆ ಅಥವಾ ಕರ್ತವ್ಯಗಳ ಅಮಲ ಬಜಾವಣಿಯು ಸದರೀ ಕಾಯದೆಯ ೯ನೇ ಕಲಮಿನ ಪ್ರಕಾರ ತಡೆಯಲ್ಪಟ್ಟಿದೆಯೋ ಆ ಹಕ್ಕು ಅಧಿಕಾರ ಮೊದಲಾದವುಗಳು ಸದರೀ ಕಲಮು ರದ್ದಾದ ಕೂಡಲೆ ಪುನಃ ೧೧ನೇ ಕಲಮಿನ ಪ್ರಕಾರ ಜೀವಂತವಾಗುವವು.

ಆದರೆ ಇನ್ನು, ಈ ಕಾಯದೆಯ ವ್ಯವಸ್ಥೆಯ ಪ್ರಕಾರ ಯಾರ ಹಕ್ಕು, ಅಧಿಕಾರ, ಕರ್ತವ್ಯ ಹೊಣೆಗಳು ಯಾವದೇ ರೀತಿಯಿಂದ ಈ ಕಾಯದೆಯಿಂದ ಬಾಧಿತವಾಗಿರುವವೋ ಅಂಥವರ ವಿಷಯದಲ್ಲಿ ಅಂಥ ಹಕ್ಕು ಅಧಿಕಾರ ಮೊದಲಾದವುಗಳು ಈ ಕಾಯದೆಯ ವ್ಯವಸ್ಥೆಗೆ ಅವಿಸಂಗತವಾದ ರೀತಿಯಲ್ಲಿ ಅಮಲ ಬಜಾವಣಿ ಮಾಡಲು ಬರುವ ಮಟ್ಟಿಗೆ ಅಮಲ ಬಜಾವಣಿಗೆ ಅರ್ಹವಾಗುವವು.

**೩೦. ಮುಂಬಯಿ ಭೂಕಂದಾಯ ಶಾಸನದ ತಿದ್ದುಪಡಿ**

೧೮೭೯ನೇ ಇಸವಿಯ ಮುಂಬಯಿ ಲ್ಯಾಂಡ ರೆವ್ಹಿನ್ಯೂ ಕೋಡದಲ್ಲಿ

1. ೫೯ನೇ ಕಲಮಿನಲ್ಲಿ "ಕೊಟ್ಟ" ಎಂಬ ಪದದ ನಂತರ ಅಂಕಿ ಮತ್ತು ಅಕ್ಷರಗಳಲ್ಲಿ ಈ ಶಬ್ದ "ಅಥವಾ ೧೦೦ ರೂ." ಎಂಬದನ್ನು ಸೇರಿಸತಕ್ಕದ್ದು.

2. ೮೮ ರಿಂದ ೯೪ ವರೆಗಿನ ಕಲಮುಗಳನ್ನು ಅಳಿಸತಕ್ಕದ್ದು.

**೩೧. ಖೋತಿ ಸೆಟ್ಲಮೆಂಟ ಕಾಯದೆಯ ತಿದ್ದುಪಡಿ**

೧೮೮೦ನೇ ಇಸವಿಯ ಖೋತಿ ಸೆಟ್ಲಮೆಂಟ ಕಾಯದೆಯಲ್ಲಿ

1. ೬ನೇ ಕಲಮಿನಲ್ಲಿ

(ಅ) "ಇದೇ" ಎಂಬ ಶಬ್ದಕ್ಕೆ ಪ್ರತಿಯಾಗಿ "ಇತ್ತು" ಎಂಬುದನ್ನು ಮತ್ತು

(ಬ) "ಪರಂಪರೆ" ಎಂಬ ಶಬ್ದದ ನಂತರ ಅಕ್ಷರ ಮತ್ತು ಅಂಕಿಗಳು "೧೯೩೯ನೇ ಇಸವಿಯ ಮುಂಬಯಿ ಟೆನನ್ಸಿ ಆ್ಯಕ್ಟ ಪಾಸಾಗುವ ಮೊದಲು" ಎಂಬದನ್ನು ಸೇರಿಸತಕ್ಕದ್ದು.

2. ೯ನೇ ಕಲಮಿನಲ್ಲಿ

(ಅ) "ಧಾರೇಕರಿಗಳು ಮತ್ತು ಅರೆ ಧಾರೆಕರಿಗಳು" ಎಂಬ ಶಬ್ದಗಳಿದ್ದಲ್ಲಿ "ಮತ್ತು ವಿಶಿಷ್ಟಾಧಿಕಾರವುಳ್ಳ ಹಿಡುವಳಿದಾರರು" ಎಂಬ ಶಬ್ದಗಳನ್ನು ಹಾಕತಕ್ಕದ್ದು; ಮತ್ತು

(ಬ) "ಕಾಯಂ ಸಾಗುವಳಿದಾರತನಗಳು" ಎಂಬ ಶಬ್ದಗಳಿಂದ ಆರಂಭವಾಗಿ "ಒಂದು ವರ್ಷಕ್ಕೆ ಮೀರಿದ" ಎಂಬ ಶಬ್ದಗಳಿಂದ ಮುಗಿಯುವ ವಾಕ್ಯಗಳನ್ನು ರದ್ದುಪಡಿಸಬೇಕು.

---

# ಮುಂಬಯಿ ಪ್ರಾಂತದ
# ಹೊಲ-ಸಾಗುವಳಿ ಕಾಯದೆಯ ವಿವರಣೆ

---

ಮುಂಬಯಿ ಪ್ರಾಂತದ ಹೊಲಸಾಗುವಳಿ ಕಾಯದೆಯನ್ನು ೧೯೩೯ರಲ್ಲಿ ಮೊದಲು ಅಂಗೀಕರಿಸಿ ೧೯೪೦ರಲ್ಲಿ ಮಾರ್ಚ ೨೭ನೇ ತಾರೀಖಿನ ದಿವಸ ಗವ್ಹರ್ನರ ಜನರಲ್ಲರು ಒಪ್ಪಿಗೆ ಕೊಟ್ಟಬಳಿಕ ಅದು ಕಾಯದೆಯಾಯ್ತು. ಆದರೆ ಇಷ್ಟರಲ್ಲಿ ಆಗಿನ ಕಾಂಗ್ರೆಸ ಮಂತ್ರಿಮಂಡಲವು ಬ್ರಿಟಿಷ ಸರಕಾರದ ಯುದ್ಧಧೋರಣದ ನಿಷೇಧಾರ್ಥವಾಗಿ ಅಧಿಕಾರತ್ಯಾಗ ಮಾಡಿ ಹೊರಬಿದ್ದಿತು. ಮುಂದೆ ಬಂದ ಸಲಹೆಗಾರ ಸರಕಾರವು ಈ ಕಾಯದೆಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ೧೯೪೧ರಲ್ಲಿ ಮುಂಬಯಿ ಪ್ರಾಂತದ ಸುರತ, ಠಾಣೆ, ಪಶ್ಚಿಮ ಖಾನದೇಶ, ಮತ್ತು ಧಾರವಾಡ ಜಿಲ್ಲೆಗಳಲ್ಲಿ ಹಾಗು ಮುಂಬಯಿ ಪ್ರಾಂತದಲ್ಲಿಯ ಅರ್ಧಬಹಿಷ್ಕೃತ ಪ್ರದೇಶಗಳಲ್ಲಿಯೂ ಬಳಕೆಯಲ್ಲಿ ತಂದಿತು. ಆನಂತರ ಮೊನ್ನೆ ಕಾಂಗ್ರೆಸ ಮಂತ್ರಿಮಂಡಲವು ಅಧಿಕಾರ ಸೂತ್ರಗಳನ್ನು ಮತ್ತೆ ವಹಿಸಿಕೊಂಡ ಕೂಡಲೆ ೧೯೪೬ ನೇ ಇಸವಿಯ ಎಪ್ರೇಲ ೧೧ ನೇ ತಾರೀಖಿನಿಂದ ಮೊದಲಿನ ಕಾಯದೆಯನ್ನು ಇಡೀ ಪ್ರಾಂತಕ್ಕೆ ಹಚ್ಚಲಾಯ್ತು. ಆದರೆ ಆ ಕಾಯದೆಯಲ್ಲಿಯ ಕೆಲವು ತಾರೀಖುಗಳಲ್ಲಿ ಹೆಚ್ಚುಕಡಿಮೆ ಮಾಡುವದವಶ್ಯವೆನಿಸಿದ್ದರಿಂದ ಮತ್ತು ಬೇರೆ ಕೆಲವು ತಿದ್ದುಪಡೆಗಳಾಗುವದುಚಿತವೆಂದೆನಿಸಿದ್ದರಿಂದ ೧೯೪೬ ನೇ ಇಸವಿಯ ಮುಂಬಯಿ ಹೊಲಸಾಗುವಳಿ (ತಿದ್ದುಪಡೆ) ಕಾಯದೆಯೆಂಬ ಕಾಯದೆಯನ್ನು ಮಾಡಬೇಕಾಯಿತು. ಈ ತಿದ್ದುಪಡೆ ಕಾಯದೆಯ ಚರ್ಚೆಯು ಶಾಸನ ಸಭೆಗಳಲ್ಲಿ ನಡೆದು ಅದು ಬಹುಮತದಿಂದ ಅಂಗೀಕೃತ

ವಾಗಿ ನವಂಬರ ೭ನೇ ದಿನಾಂಕದಲ್ಲಿ ಮುಂಬಯಿ ಗವ್ಹರ್ನರರ ಸಮ್ಮತಿ ಯನ್ನು ಪಡೆದು ನವ್ಹಂಬರ ೮ನೇ ತಾರೀಖಿನಿಂದ ಇಡೀ ಪ್ರಾಂತದಲ್ಲಿ ಬಳಕೆಗೆ ಬಂದಿದೆ.

ಈ ತಿದ್ದುಪಡೆಯ ಕಾಯದೆಯ ಉದ್ದೇಶ-ಕಾರಣಗಳನ್ನು ಕಂದಾಯ ಮಂತ್ರಿಗಳು ಹೇಳುವಾಗ ೧೯೩೯ ನೇ ಇಸವಿಯ ಕಾಯದೆಯಿಂದ ಸಾಗು ವಳಿದಾರರಿಗೆ ಕೊಡಲ್ಪಟ್ಟ ಹಕ್ಕುಗಳ ಹಾಗೂ ಹೊಲದೊಡೆಯರ ಮೇಲೆ ಹೊರಿಸಲಾದ ಹೊಣೆಗಳ ನಿರ್ವಾಹವು ಸಾಕಷ್ಟು ಪರಿಣಾಮಕರವಾದ ರೀತಿ ಯಲ್ಲಿ ಸಾಗುವಳಿದಾರರ ಅಜ್ಞಾನ ಹಾಗೂ ನಿರಕ್ಷರತೆಯ ಮೂಲಕ ನಡೆ ಯಲಿಲ್ಲೆಂದು ಅನುಭವಕ್ಕೆ ಬಂದ ಮೂಲಕ ಸಾಗುವಳಿದಾರರಿಗೆ ದೊರೆತ ಹಕ್ಕುಗಳ ಸಂರಕ್ಷಣೆ ಪ್ರಭಾವಿಯಾಗಿ ಆಗಬೇಕಾದರೆ ಸಂಬಂಧಪಟ್ಟ ಕಲಮು ಗಳಲ್ಲಿ ಬದಲಾವಣೆಯಾಗಿ ರೈತನಿಗೆ ಈ ಕಾಯದೆಯ ಪ್ರಕಾರ ದೊರೆತ ಹಕ್ಕುಗಳಿಲ್ಲೆಂಬುದನ್ನು ಸಿದ್ಧಮಾಡುವ ಭಾರವನ್ನು ಹೊಲದೊಡೆಯನ ಮೇಲೆ ಹೊರಿಸುವದಗತ್ಯವೆಂಬ ಉದ್ದೇಶದಿಂದ ತಿದ್ದುಪಡೆ ಮಾಡಬೇಕಾಗಿದೆ ಯೆಂದು ಹೇಳಿರುವವನ್ನು ಮರೆಯಲಾಗದು.

## ೧ನೇ ಪ್ರಕರಣದ ವಿವರಣೆ

ಈ ಪ್ರಕರಣದಲ್ಲಿ ಕೆಲವು ಪಾರಿಭಾಷಿಕ ಶಬ್ದಗಳ ಲಕ್ಷಣ-ವ್ಯಾಖ್ಯೆ ಗಳನ್ನು ವಿವರಿಸಿದೆ. ಅದಕ್ಕು ಮೊದಲು ಈ ಕಾಯದೆಯು ಯಾವ ತಾರೀಖಿ ನಿಂದ ಬಳಕೆಯಲ್ಲಿ ಬರತಕ್ಕದ್ದೆಂಬ ಬಗ್ಗೆ ಉಲ್ಲೇಖವಿದೆ. ಪ್ರಾಂತಿಕ ಸರ ಕಾರದವರು ತಮ್ಮ ಸರಕಾರೀ ಗಜೆಟ್ಟಿನಲ್ಲಿ ಈ ಕಾಯದೆಯು ಯಾವ ತಾರೀಖಿನಿಂದ ಅಮಲಿನಲ್ಲಿ ಬರುವದೆಂದು ಪ್ರಕಟಿಸುವರೋ ಆ ತಾರೀಖಿ ನಿಂದ ಇದರ ಬಳಕೆಯು ಆರಂಭವಾಗುವದು. ಈ ವ್ಯವಸ್ಥೆಯ ಪ್ರಕಾರ ಮುಂಬಯಿ ಸರಕಾರದವರು ೧೯೪೬ ನೇ ಇಸವಿಯ ನವ್ಹಂಬರ ೮ ನೇ ತಾರೀಖಿನಿಂದ ೧೯೪೬ ನೇ ಇಸವಿಯ ಮುಂಬಯಿ ಹೊಲಸಾಗುವಳಿ (ತಿದ್ದು ಪಡೆ) ಕಾಯದೆಯು ಬಳಕೆಯಲ್ಲಿ ಬರತಕ್ಕದ್ದೆಂದು ಗಜೆಟ್ಟಿನಲ್ಲಿ ಪ್ರಕಟಿ ಸಿದರು. ಅಂದಿನಿಂದ ಈ ಕಾಯದೆಯು ಮುಂಬಯಿ ನಗರವನ್ನು ಬಿಟ್ಟು ಉಳಿದ ಇಡೀ ಪ್ರಾಂತದಲ್ಲಿ ಬಳಕೆಯಲ್ಲಿ ಬಂದಿದೆ.

## ವ್ಯಾಖ್ಯೆಗಳ ಮಥಿತಾರ್ಥ

“ಒಕ್ಕಲತನ”ವೆಂಬ ವ್ಯಾಪಕ ಶಬ್ದದಲ್ಲಿ ತೋಟದ ಬೇಸಾಯ ಹೈನು ಮಾಡುವದು, ಕೋಳೀ ಸಾಕುವದು, ಬೀಜದ ಹೋರಿಗಳ ಸಂಗೋಪನ

ಮೊದಲಾದ ಕಸಬುಗಳ ಸೇರ್ಪಡೆಯನ್ನು ಮಾಡಿರುವರು. ಆದರೆ ಕೇವಲ ಕಟ್ಟಿಗೆ ಕಡಿದು ಹೊಟ್ಟೆ ತುಂಬಿಕೊಳ್ಳುವ ಕಸಬು ಇದರಲ್ಲಿ ಬರುವದಿಲ್ಲ.

ಭೂಮಿಯ ಕಿಮ್ಮತ್ತನ್ನು ಬೆಳೆಯಿಸುವ ಯಾವದೇ ಬಗೆಯ ಸುಧಾರಣೆಗೆ ಸುಧಾರಣೆಯೆಂದು ವ್ಯಾಖ್ಯೆ ಮಾಡಲಾಗಿದೆ. ಇದರಲ್ಲಿ ಕೆರೆಕಾವಲಿ, ಬಾವಿ, ಕಟ್ಟೆ, ಒಡ್ಡು ಒತ್ತಲ ಬೇಲಿ ಹಚ್ಚುವದು ಇವೇ ಮೊದಲಾದ ಕೆಲಸಗಳು ಬರುತ್ತವೆ.

ಸರಕಾರದವರು ಒಂದು ಕಾಯದೆಯನ್ನು ಮಾಡಿದಕೂಡಲೆ ಅದರ ಅಡಳಿತದ ಸಲುವಾಗಿ ಕೆಲವು ನಿಯಮಗಳನ್ನು ಮಾಡುವದು ವಾಡಿಕೆ. ಈ ಪ್ರಕಾರದ ನಿಯಮಗಳನ್ನು ಸರಕಾರದವರು ತೀವ್ರವೇ ಈ ಕಾಯದೆಯ ಅಡಳಿತದ ಸಲುವಾಗಿಯಾದರೂ ಮಾಡಲಿರುವರು. ಅಂಥ ನಿಯಮಗಳಲ್ಲಿ "ಗೊತ್ತುಮಾಡಿದ" ಪ್ರಕಾರವೇ ಆಡಳಿತವು ನಡೆಯತಕ್ಕದ್ದು. ಈ ನಿಯಮಾವಳಿಗಳಲ್ಲಿ ಮಾಮಲೇದಾರರ ಕಡೆಗೆ ಯಾವ ರೀತಿ ಅರ್ಜಿಯನ್ನು ಕಳಿಸಬೇಕು, ಸ್ಟಾಂಪ ಎಷ್ಟು ಹಚ್ಚಬೇಕು, ಮಾಮಲೇದಾರರು ಅರ್ಜಿಯ ವಿಚಾರಣೆ ಹೇಗೆ ಮಾಡಬೇಕು ಇವೇ ಮೊದಲಾದ ವಿಷಯಗಳ ಸಂಪೂರ್ಣ ಯೋಜನೆ ವಿವರಗಳು ಇರುತ್ತವೆ.

"ಒಕ್ಕಲತನದ ಲಾಭಗಳು" ಎಂಬ ಪದದ ವ್ಯಾಖ್ಯೆಯ ಅರ್ಥವು ತಕ್ಕಮಟ್ಟಿಗೆ ಸ್ಪಷ್ಟವಾಗಿದೆ. ಹೊಲದಿಂದ ಬಂದ ಒಟ್ಟು ಸ್ಥೂಲಮಾನ ಉತ್ಪನ್ನದೊಳಗಿಂದ ಸಾಗುವಳಿಗೆ ತಗಲಿದ ಖರ್ಚು ಮತ್ತು ಪ್ರತ್ಯಕ್ಷವಾಗಿ ಹೊಲದಲ್ಲಿ ದುಡಿದವನ ಕೂಲಿ ಮೊದಲಾದವುಗಳನ್ನು ಕಳೆದು (ಲಾಗವಡಿ ಖರ್ಚು ಕಳೆದು) ನಂತರ ಏನಾದರೂ ಲಾಭವುಳಿದರೆ ಅದಕ್ಕೆ ಒಕ್ಕಲತನದ ಲಾಭವೆಂದು ಕರೆಯತಕ್ಕದ್ದು, ಸಾಗುವಳಿಗೆ ಬೇಕಾಗುವ ಖರ್ಚಿನಲ್ಲಿ ಬೇಸಗೆಯ ರಾಬ ಮೊದಲ್ಮಾಡಿಕೊಂಡು ಬಿತ್ತಲಿಕ್ಕೆ ಬೇಕಾಗುವ ಬೀಜ, ಎಡಿಹೊಡೆಯುವದು, ಹೊಲ ಕಾಯ್ದ ಕೂಲಿ, ರಾಶಿ ಕಾಲಕ್ಕೆ ಆದ ಖರ್ಚು, ಇವೇ ಮೊದಲಾದ ಖರ್ಚು ವೆಚ್ಚಗಳಲ್ಲಿ ಬರುತ್ತವೆ.

"ಯೋಗ್ಯ ಅಥವಾ ಸಮಂಜಸ ಲಾವಣಿ"ಯೆಂದರೆ ೧೨ನೇ ಕಲಮಿನಲ್ಲಿ ಹೇಳಿದ ಪ್ರಕಾರ ಮಾಮಲೇದಾರರು ಗೊತ್ತುಪಡಿಸುವ ಲಾವಣಿಯೆಂದು ವ್ಯಾಖ್ಯೆ ಮಾಡಲಾಗಿದೆ. ಆದ್ದರಿಂದ "ಯೋಗ್ಯಲಾವಣಿ"ಯ ಪ್ರಶ್ನೆಯು ಅಥವಾ ವಾದವು ಯಾವಾಗ ಹುಟ್ಟುವದೆಂಬದನ್ನು ಮೊದಲು ತಿಳಿದುಕೊಳ್ಳುವದು ಅವಶ್ಯ. ಹೊಲದೊಡೆಯ ಮತ್ತು ರೈತರ ನಡುವೆ

ಲಾವಣಿಯ ಬಗ್ಗೆ ಸ್ಪಷ್ಟವಾದ ಕರಾರು ಏನೂ ಇಲ್ಲದಿದ್ದ ಪಕ್ಷದಲ್ಲಿ ಅಥವಾ ಇಂಥ ಒಡಂಬಡಿಕೆಯ ಕರಾರೇನೂ ಇಲ್ಲದಿರುವಾಗ ಅಲ್ಲಿಯ ಸ್ಥಾನಿಕ ರೀತಿ ರಿವಾಜಗಳ ಪ್ರಕಾರ ಕೊಡತಕ್ಕ ಲಾವಣಿಯ ಬಗ್ಗೆ ಅಥವಾ ಆ ರೀತಿರಿವಾಜ ಗಳ ಬಗ್ಗೆ ಏನಾದರೂ ತಂಟೆಯಿದ್ದ ಪಕ್ಷದಲ್ಲಿ ಮಾತ್ರ ಮಾಮಲೇದಾರರ ಕಡೆಗೆ ರೈತರಾಗಲಿ ಅಥವಾ ಹೊಲದೊಡೆಯರಾಗಲಿ ಅರ್ಜಿ ಮಾಡಿಕೊಂಡು "ಯೋಗ್ಯ ಲಾವಣಿ"ಯನ್ನು ಗೊತ್ತುಪಡಿಸಿಕೊಡಲು ಬಿನ್ನವಿಸಿಕೊಳ್ಳ ಬೇಕೆಂದು ೫ನೇ ಕಲಮಿನಲ್ಲಿ ಹೇಳಲ್ಪಟ್ಟಿದೆ. ಅಂದರೆ ರೈತರ ಹಾಗೂ ಹೊಲ ದೊಡೆಯರ ನಡುವೆ ಸ್ಪಷ್ಟವಾದ ಒಡಂಬಡಿಕೆಯಿದ್ದರೆ ಮಾಮಲೇದಾರ ರಿಗೆ ಯೋಗ್ಯ ಲಾವಣಿಯನ್ನು ನಿರ್ಣಯಿಸುವ ಅಧಿಕಾರವೇ ಹುಟ್ಟುವದಿಲ್ಲ.

"ಯೋಗ್ಯ ಅಥವಾ ಸಮಂಜಸ ಲಾವಣಿ"ಯನ್ನು ಗೊತ್ತುಮಾಡು ವಾಗ ಮಾಮಲೇದಾರರು ೧೫ನೇ ಕಲಮಿಗೆ ಒಳಗಾಗಿ ನಡೆಯತಕ್ಕದ್ದೆಂದು ಮುಂದೆ ಹೇಳಲ್ಪಟ್ಟಿದೆ. ೧೫ನೇ ಕಲಮಿನಲ್ಲಿ ಪ್ರಾಂತಿಕ ಸರಕಾರವು ಕಾಲ ಕಾಲಕ್ಕೆ ಬೇರೆ ಬೇರೆ ಜಿಲ್ಲೆ, ತಾಲೂಕ, ಗ್ರಾಮ ಮೊದಲಾದ ವಿಭಾಗಗಳ ಲ್ಲಿಯ ಹೊಲಗಳ ಬಗ್ಗೆ ಹೊಲದೊಡೆಯರು ಸ್ವೀಕರಿಸತಕ್ಕ ಲಾವಣಿಯ ಪರಮಾವಧಿಯನ್ನು ಗೊತ್ತುಪಡಿಸಿ ಅದರಂತೆ ಸರಕಾರೀ ಗ್ಯಾಜಿಟ್ಟಿನಲ್ಲಿ ಪ್ರಕಟನೆಯನ್ನು ಪ್ರಸಿದ್ಧಿಸುವದು. ಆದರೆ ಹೀಗೆ ಪರಮಾವಧಿಯ ಲಾವ ಣಿಯ ದರವನ್ನು ಗೊತ್ತುಪಡಿಸುವಾಗ ನೀರಾವರಿ ಹೊಲಗಳ ಬಗ್ಗೆ ಬೆಳೆಯ ಒಂದುನಾಲ್ಕಾಂಶ ಅಥವಾ ಅದರ ಬೆಲೆ ಮತ್ತು ನೀರಾವರಿಯಿಲ್ಲದ ಇತರ ಹೊಲಗಳ ಬಗ್ಗೆ ಬೆಳೆಯ ಒಂದುಮೂರಾಂಶ ಅಥವಾ ಅದರ ಬೆಲೆಗಿಂತ ಹೆಚ್ಚಿಗೆ ನಿರ್ಣಯಿಸತಕ್ಕದ್ದಲ್ಲೆಂದು ವಿಧಿಸಲಾಗಿದೆ. ಹೀಗೆ ಪ್ರಸಿದ್ಧವಾದ ಪ್ರಕಟನೆಯಲ್ಲಿಯ ಪರಮಾವಧಿ ಪ್ರಮಾಣಕ್ಕಿಂತ ಹೆಚ್ಚಿಗೆ ಲಾವಣಿಯನ್ನು ತೆಗೆದುಕೊಳ್ಳಲಿಕ್ಕೆ ಹೊಲದೊಡೆಯರಿಗೆ ಬರಲಾರದು. ಸಮಂಜಸ ಲಾವಣಿ ಯನ್ನು ನಿರ್ಧರಿಸುವಾಗ ಮಾಮಲೇದಾರ ಸಾಹೇಬರು ಈ ಬಗೆಯ ಪರಮಾವಧಿ ಪ್ರಮಾಣವನ್ನು ಆ ಕ್ಷೇತ್ರದ ಬಗ್ಗೆ ಗೊತ್ತು ಮಾಡಿ ಸರಕಾರದವರು ಪ್ರಕಟನೆಯನ್ನು ಹೊರಡಿಸಿರುವರೋ ಏನೆಂಬವನ್ನು ನೋಡತಕ್ಕದ್ದು.

"ಸಮಂಜಸ ಲಾವಣಿ"ಯನ್ನು ನಿರ್ಣಯಿಸುವಾಗ ಮಾಮಲೇದಾರರು ಯಾವ ಹೊಲದ ಬಗ್ಗೆ ತಂಟೆಯಿದೆಯೋ ಆ ಹೊಲದ ನೆರೆಹೊರೆಯಲ್ಲಿಯ ಅದೇತರದ ಹೊಲಗಳ ಲಾವಣಿಯು ಎಷ್ಟಾಗುತ್ತದೆಯೆಂಬುದನ್ನು ಮತ್ತು

ಅಂಥ ಹೊಲಗಳ ಉತ್ಪನ್ನ-ಲಾಭ ಮೊದಲಾದವುಗಳನ್ನು ವಿಚಾರಿಸತಕ್ಕದ್ದು ಇದಲ್ಲದೆ ಆ ಸ್ಥಳದಲ್ಲಿ ಕಾಳುಕಡಿಗಳಿಗೆ ಇದ್ದ ಧಾರಣೆಯೇನು, ಅವುಗಳ ಕಿಮ್ಮತ್ತು ಏನು? ಹೊಲದೊಡೆಯನು ಮಾಡಿದ ಸುಧಾರಣೆಗಳಾವುವು? ಆ ಹೊಲದ ಬಗ್ಗೆ ಕೊಡತಕ್ಕ ತೆರಿಗೆಯೆಷ್ಟು? ಇವೇ ಮೊದಲಾದ ವಿಷಯ ಗಳನ್ನು ಸಂಪೂರ್ಣ ವಿಚಾರ ಮಾಡತಕ್ಕದ್ದು ಮತ್ತು ಸರಕಾರದವರು ಈ ಕಾಯದೆಯ ಪ್ರಕಾರ ಮಾಡುವ ನಿಯಮಗಳಲ್ಲಿ ಮತ್ತೆ ಯಾವವಾದರೂ ವಿಷಯಗಳ ವಿಚಾರ ಮಾಡಬೇಕೆಂದಿದ್ದರೆ ಅದರಂತೆ ಮಾಡಬೇಕು.

"ಸಮಂಜಸ ಲಾವಣಿ"ಯ ಬಗ್ಗೆ ತಂಟೆಯುತ್ಪನ್ನವಾಗಿ ಮಾಮಲೇ ದಾರರ ಕಡೆಗೆ ಅರ್ಜಿಯು ಬಂದ ಕೂಡಲೆ ಅವರು ಯಾರಿಂದ ಅರ್ಜಿಯು ಬಂದಿದೆಯೋ ಅವರ ವಿರುದ್ಧ ಪಕ್ಷದವರಿಗೆ (ರೈತನಿಂದ ಬಂದಿದ್ದರೆ ಒಡೆಯ ನಿಗೆ; ಒಡೆಯನಿಂದ ಬಂದಿದ್ದರೆ ರೈತನಿಗೆ) ನೋಟೀಸು ಕೊಡತಕ್ಕದ್ದು. ಆ ನೋಟೀಸಿನ ಪ್ರಕಾರ ಅವರಿಗೆ ಇಂಥ ತಾರೀಖಿನ ದಿವಸ ಹಾಜರಿರಬೇಕೆಂದು ತಿಳಿಸತಕ್ಕದ್ದು. ಆ ದಿವಸ ಔಪಚಾರಿಕ ರೀತಿಯಿಂದ ಚೌಕಶಿ ಮಾಡಿ ಹೊಲದ ಸಮಂಜಸ ಲಾವಣಿಯನ್ನು ಗೊತ್ತುಪಡಿಸಬೇಕು. ಒಂದು ಸಮಯ, ಮಾಮಲೇದಾರರ ನಿರ್ಣಯವು ಮನಸ್ಸಿಗೆ ಬಾರದಿದ್ದರೆ ಯಾವ ಪಕ್ಷದವರಿಗೆ ಅವರ ನಿರ್ಣಯದಿಂದ ವ್ಯಸನವಾಗಿದೆಯೋ ಅವರು ಆ ನಿರ್ಣಯವಾದ ತಾರೀಖಿನಿಂದ ಎರಡು ತಿಂಗಳೊಳಗಾಗಿ ತಮ್ಮ ಕ್ಷೇತ್ರದ ಮೇಲೆ ಅಧಿಕಾರವಿರುವ ೧ ನೇ ವರ್ಗ ಮುನಸುಫರ ಕಡೆಗೆ ಅಪೀಲು ಮಾಡ ತಕ್ಕದ್ದು. ೧ ನೇ ವರ್ಗದ ಮುನಸುಫರು ಮಾಮಲೇದಾರರ ನಿರ್ಣಯವನ್ನೇ ಎತ್ತಿ ಹಿಡಿಯಬಹುದು; ಅಥವಾ ಅದನ್ನು ತಿರುಗಿಸಬಹುದು. ಇಲ್ಲವೆ ಹೆಚ್ಚು ಕಡಿಮೆ ಮಾಡಬಹುದು. ಅಥವಾ ಹೆಚ್ಚಿನ ಪುರಾವೆಯನ್ನು ತೆಗೆದು ಕೊಳ್ಳಲು ಮಾಮಲೇದಾರರಿಗೆ ಆಜ್ಞೆ ಮಾಡಬಹುದು.

"ಸ್ವತಃ ಹೊಲ ಮಾಡುವದು" ಎಂಬ ಪದದ ವ್ಯಾಖ್ಯೆಯು ಬಹಳ ವ್ಯಾಪಕ ಹಾಗೂ ವಿಸ್ತೃತ ಸ್ವರೂಪದ್ದಿರುವದು. ತನ್ನ ಸ್ವಂತದ ಶ್ರಮದಿಂದ ಹೊಲ ಸಾಗುಮಾಡುವದಂತೂ ಸ್ವತಃ ಸಾಗುಮಾಡಿದಂತೆಂದು ಬೇರೆ ಹೇಳುವ ಅಗತ್ಯವಿಲ್ಲ. ಸ್ವಂತದ ಮೇಲ್ವಿಚಾರಣೆಗಧೀನವಾಗಿ ಅಥವಾ ಮನೆಯಲ್ಲಿಯ (ಕುಟುಂಬದಲ್ಲಿಯ) ಯಾರೊಬ್ಬರ ಮೇಲ್ವಿಚಾರಣೆಗೊಳ ಪಟ್ಟು ಆಳುಗಳ ಮುಖಾಂತರ ಅಥವಾ ಬಾಡಿಗೆಯ ಕೂಲಿಕಾರರ ಮುಖಾಂತರ ಹೊಲವನ್ನು ಸಾಗು ಮಾಡಿಸಿದರೂ ಸ್ವಂತ ಸಾಗು ಮಾಡಿ

ದಂತೆಯೇ ಎಂದು ಹೇಳಲ್ಪಟ್ಟಿದೆ ; ೧೯೪೬ ನೇ ಇಸವಿಯ ತಿದ್ದುಪಡೆಯಿಂದ ಬೆಳೆಯ ಕೋರುಪಾಲಿನ ಕರಾರಿನ ಮೇಲೆ ಹೊಲವನ್ನು ಮಾಡಿಸಿದರೆ ಸ್ವಂತ ಸಾಗಿಸಿದಂತಲ್ಲೆಂದು ಹೇಳಲಾಗಿದೆ. ಆದರೆ ಇಂತಿಷ್ಟು ಚೀಲ ಧಾನ್ಯವನ್ನು ಇಲ್ಲವೆ ಇಂತಿಷ್ಟು ಹಣವನ್ನು ಕೊಡುವ ಕರಾರಿನಿಂದ ಆಳನ್ನು ನೇಮಿಸಿ ಅವನ ಮುಖಾಂತರ ಹೊಲ ಸಾಗುಮಾಡಬಹುದು. ಹೀಗಾದರೆ ಸ್ವಂತ ಸಾಗುಮಾಡಿದಂತೆಯೆ. ಇದರಿಂದ ಹೊಲಗಳ ಒಡೆಯರಿಗೆ ಸ್ವಲ್ಪ ಅವಕಾಶ ಸಿಕ್ಕಿದೆ. "ಸ್ವತಃ ಹೊಲಮಾಡುವದು" ಎಂದರೆ ಕೇವಲ ಸ್ವತಃ ಯಾರು ಹೊಲದಲ್ಲಿ ದುಡಿಯುವರೋ ಅವರಿಂದಲೇ ಮಾಡಲ್ಪಡುವದು ಎಂಬ ಅರ್ಥವಿರಬೇಕೆಂದು ಉಗ್ರವಾದಿಗಳ ಮತವಿತ್ತು. ಆದರೆ ಹೀಗೆ ಮಾಡುವದು ಅತ್ಯಂತ ಅವ್ಯವಹಾರ್ಯವಾಗುವದೆಂದು ತಿಳಿದು ಸರಕಾರದವರು ಹಾಗೆ ಮಾಡಲಿಲ್ಲ. ಸದ್ಯದ ವ್ಯಾಖ್ಯೆಯಿಂದ ದೊಡ್ಡದೊಡ್ಡ ಜಮೀನದಾರರು ರೈತರ ಕಡೆಯಿಂದ ಹೊಲಗಳನ್ನು ಬಿಡಿಸಿ ಸ್ವತಃ ಸಾಗುಮಾಡುವದಾಗಿ ಹೇಳಿ ತಮ್ಮ ವಶಕ್ಕೆ ತೆಗೆದುಕೊಂಡು ಆಳುಗಳ ಮುಖಾಂತರ ಹೊಲಗಳನ್ನು ಸಾಗು ಮಾಡಿಸುವದರಿಂದ ಸಂರಕ್ಷಿತ ರೈತತನದ ಹಕ್ಕು ರೈತರಿಗೆ ಸಿಗುವದಶಕ್ಯವಾಗುವದೆಂದು ಕೆಲವರು ವಾದಿಸುವರು. ಕೆಲಮಟ್ಟಿಗೆ ಹೀಗಾಗುವದೇನೋ ನಿಜ. ಯಾಕಂದರೆ ಕಾಯದೆಯ ಪ್ರಕಾರ ಆಳುಗಳ ಮುಖಾಂತರ ಅಥವಾ ಬಾಡಿಗೆಯ ಕೂಲಿಕಾರರ ಮುಖಾಂತರ ಹೊಲವನ್ನು ಸಾಗು ಮಾಡಿಸಲು ಬರುವದರಿಂದ ಜಮೀನದಾರರು ನೌಕರರನ್ನು ಇಟ್ಟುಕೊಂಡು ಅಥವಾ ರೈತರ ಕಡೆಯಿಂದ ನೌಕರ ನಾಮೆಗಳನ್ನು ಬರೆಸಿಕೊಂಡು ಹೊಲವನ್ನು ಸಾಗ ಮಾಡಲಾರಂಭಿಸುವದು ಸಹಜ.

ಅವಿಭಕ್ತ ಹಿಂದೂ ಕುಟುಂಬದಲ್ಲಿಯ ಯಾವನೊಬ್ಬನಿಂದ ಹೊಲವು ಸಾಗಮಾಡಲ್ಪಟ್ಟರೂ ಆ ಹೊಲವನ್ನು ಆ ಕುಟುಂಬವು ಸ್ವತಃ ಮಾಡಿದೆಯೆಂದು ತಿಳಿಯಬೇಕಾಗಿ ಕಾಯದೆಯಲ್ಲಿ ನಿರ್ದೇಶವಿದೆ.

ಸಾಗುವಳಿದಾರ ಅಥವಾ ರೈತನು ಸಂರಕ್ಷಿತ ರೈತತನದ ಹಕ್ಕಿಗೆ ಪಾತ್ರನಾಗಬೇಕಾದರೆ ತಾನು ಹಿಡಿದ ಹೊಲವನ್ನು ಸ್ವತಃ ಸಾಗಮಾಡಬೇಕೆಂದಿಷ್ಟು ಎರಡನೆಯವರಿಗೆ ಪೋಟಲಾವಣಿಗೆ (ಒಳಲಾವಣಿಗೆ) ಸಾಗಿಸತಕ್ಕದ್ದಲ್ಲೆಂದು ಉಲ್ಲೇಖವು ಮುಂದೆ ೫ ನೇ ಕಲಮಿನಲ್ಲಿದೆ. ಆದರೆ ಸಾಗುವಳಿಯನ್ನು ಮಾಡುವ ರೈತನು ಅಲ್ಪವಯಿ ಅಥವಾ ವಿಧವೆಯಾಗಿದ್ದರೆ ಅಥವಾ ಏನಾದರೂ ಶಾರೀರಿಕ ಅಥವಾ ಮಾನಸಿಕ ದೌರ್ಬಲ್ಯವುಳ್ಳವರಿದ್ದರೆ ಅಂಥವರು

ಆಳುಗಳ ಮುಖಾಂತರ ಇಲ್ಲವೆ ಬಾಡಿಗೆಯ ಕೂಲಿಕಾರರ ಮುಖಾಂತರ ಸಾಗುವಮಾಡಿದರೆ ಅವರೇ ಸ್ವತಃ ಮಾಡಿರುವವರೆಂದು ತಿಳಿಯತಕ್ಕದ್ದೆಂದು ೧ ನೇ ಸ್ಪಷ್ಟೀಕರಣದಲ್ಲಿ ಹೇಳಲಾಗಿದೆ. ಅವಿಭಕ್ತ ಹಿಂದೂ ಕುಟುಂಬ ದಲ್ಲಿಯ ಯಾವನೊಬ್ಬನು ಹೊಲವನ್ನು ಸಾಗುವಮಾಡಿ ಸ್ವತಃ ದುಡಿಯು ತ್ತಿದ್ದರೆ ಆ ಕುಟುಂಬವು ಹೊಲವನ್ನು ಸ್ವತಃ ಸಾಗುವಮಾಡಿದೆಯೆಂದು ತಿಳಿಯ ತಕ್ಕದ್ದೆಂದು ೨ ನೇ ಸ್ಪಷ್ಟೀಕರಣದ ಅರ್ಥವಿದೆ. ಒಟ್ಟಿನಲ್ಲಿ " ಸ್ವತಃ ಹೊಲ ಸಾಗುವಮಾಡುವದು " ಎಂಬ ಪದಕ್ಕೆ ಸಾಕಷ್ಟು ವ್ಯಾಪಕ ಅರ್ಥವಿರುವದರಿಂದ ಈ ಕಾಯದೆಯಿಂದಾಗಬಹುದಾಗಿದ್ದ ಅನೇಕ ಅರ್ಥಗಳನ್ನು ತಪ್ಪಿಸಲು ಸಾಧ್ಯವಾಗಿದೆ.

## ೧. (ಅ) ನೇ ಪ್ರಕರಣದ ವಿವರಣೆ

೧೯೪೬ ನೇ ಇಸವಿಯ ಮುಂಬಯಿ ಹೊಲ ಸಾಗುವಳಿ ( ತಿದ್ದುಪಡಿ) ಕಾಯದೆಯಿಂದ ಹೊಸದಾಗಿ ಸೇರಿಸಲ್ಪಟ್ಟ ಪ್ರಕರಣವಿದು. ಈ ಪ್ರಕರಣ ದಲ್ಲಿ ಒಂದೇ ಒಂದು ಕಲಮಿದೆ. ಆ ಕಲಮು ೨ (ಅ) ಎಂಬುದು ಈ ಕಲಮಿನಲ್ಲಿ ಸಾಗುವಳಿದಾರನೆಂದರೆ ಯಾರು ಎಂಬ ಬಗ್ಗೆ ಆ ಶಬ್ದದ ವ್ಯಾಖ್ಯೆ ಯಿದೆ. ಎರಡನೆಯವರ ಒಡೆತನಕ್ಕೆ ಸೇರಿದ ಭೂಮಿಯನ್ನು ಕಾಯದೇಶೀರ ರೀತಿಯಿಂದ ಸಾಗುವಳಿಮಾಡುತ್ತಿರುವ ಮನುಷ್ಯನು ಸಾಗುವಳಿದಾರನೆಂದು ತಿಳಿಯಲಾಗುವದೆಂದಿದೆ. ಆದರೆ ಆ ಹೊಲವನ್ನು ಒಡೆಯನು ಸ್ವತಃ ಸಾಗು ಮಾಡುತ್ತಿರಬಾರದು; ಈ ಸಾಗುವಳಿದಾರನು ಒಡೆಯನ ಮನೆತನದವನಾಗಿರ ಬಾರದು. ಅಥವಾ ಕಾಳಿನ ರೂಪದಿಂದ ಇಲ್ಲವೆ ಹಣದ ರೂಪದಿಂದ ಕೂಲಿ ತೆಗೆದುಕೊಂಡು ಹೊಲವನ್ನು ಸಾಗುವಮಾಡುತ್ತಿರಬಾರದು. ಈ ಮೂರು ಪ್ರಸಂಗಗಳಲ್ಲಿಯ ದುಡಿಮೆಗಾರನು ಈ ಕಾಯದೆಯ ಪ್ರಕಾರ ಸಾಗುವಳಿ ದಾರನಾಗಲಾರನು. ಈ ತಿದ್ದುಪಡೆ ಕಾಯದೆಯು ಬಳಕೆಯಲ್ಲಿ ಬಂದ ತಾರೀಖಿನಿಂದ ಒಂದು ವರ್ಷದೊಳಗಾಗಿ ಹೊಲಗಳ ಒಡೆ ಯರು ತಮ್ಮ ಹೊಲಗಳನ್ನು ಮಾಡುತ್ತಿರುವ ರೈತರು ಈ ಕಾಯದೆಯ ಪ್ರಕಾರ ಸಾಗುವಳಿದಾರರಲ್ಲೆಂಬ ಬಗ್ಗೆ ತಮ್ಮ ಹೊಲಗಳಿದ್ದ ತಾಲೂಕುಗಳ ಮಾಮಲೇದಾರರ ಕಡೆಗೆ ಅರ್ಜಿಯನ್ನು ಮಾಡಿಕೊಳ್ಳದಿದ್ದರೆ ಅಂತಹ ರೈತ ರೆಲ್ಲ ಸಾಗುವಳಿದಾರರೆಂದೇ ತಿಳಿಯತಕ್ಕದ್ದೆಂದು ಇದರಲ್ಲಿ ಹೇಳಿದೆ. ಅರ್ಥಾತ್ ತಮ್ಮ ರೈತರು ಸಾಗುವಳಿದಾರ ಅಥವಾ ಸಂರಕ್ಷಿತ ರೈತರಲ್ಲೆಂದು ಶೀರ್ಮಾನಿಸಿಕೊಳ್ಳುವ ಹೊಣೆಯ ಭಾರವನ್ನು ಒಡೆಯರ ಮೇಲೆ ಹೊರಿಸ

ಲಾಗಿದೆ. ತಮ್ಮ ಮೇಲಿನ ಹೊಣೆಯನ್ನು ನಿರ್ವಹಿಸಲು ಒಡೆಯರು ತಪ್ಪಿದರೆ ಎಲ್ಲ ರೈತರೂ ಸಾಗುವಳಿದಾರರೇ ಎಂದು ಗೃಹೀತ ಇಟ್ಟುಕೊಂಡು ಈ ಕಾಯದೆಯ ಪ್ರಕಾರವಿದ್ದ ಎಲ್ಲ ಹಕ್ಕುಗಳಿಗೆ ಅವರು ಬಾಧ್ಯಸ್ಥರಾಗುವರು.

**೨ನೇ ಪ್ರಕರಣದ ವಿವರಣೆ**

ಎರಡನೇ ಪ್ರಕರಣದಲ್ಲಿಯ ವಿಷಯಗಳನ್ನು ಸಂಪೂರ್ಣ ತಿಳಿದುಕೊಂಡರೆ ಹೊಲ ಸಾಗುವಳಿಯ ಕಾಯದೆಯ ಪೂರ್ಣ ಜ್ಞಾನವಾದಂತೆಯೇ ಎಂದು ಹೇಳಬಹುದು. ಟಿನನ್ಸಿ ಕಾಯದೆಯ ಕೆನೆ ಅಥವಾ ತಿರುಳು ಈ ಪ್ರಕರಣದಲ್ಲಿರುವದರಿಂದ ಇದು ಅತ್ಯಂತ ಮಹತ್ವದ ಪ್ರಕರಣವೆಂದು ಹೇಳಬಹುದು. ಆದ್ದರಿಂದ ಈ ಪ್ರಕರಣದಲ್ಲಿಯ ವಿಷಯಗಳನ್ನು ಸಂಗ್ರಹ ರೂಪವಾಗಿ ಇದರಡಿಯಲ್ಲಿ ಕೊಡುತ್ತಿದ್ದೇವೆ.

**ರೈತ (ಸಾಗುವಳಿದಾರ) ನೆಂದರೆ ಯಾರು ?**

೧ ನೇ ಪ್ರಕರಣದಲ್ಲಿ ಪಾರಿಭಾಷಿಕ ಶಬ್ದಗಳ ವ್ಯಾಖ್ಯೆಗಳು ಕೊಡಲ್ಪಟ್ಟಿವೆ. ಸಾಗುವಳಿದಾರ ( ಟಿನಂಟ ) ಎಂಬ ಶಬ್ದಕ್ಕೆ ಭೂಕಂದಾಯ ಶಾಸನದಲ್ಲಿ ಯಾವ ಅರ್ಥವುಂಟೆಂಬದನ್ನು ನೋಡುವದು ನಮ್ಮ ಕರ್ತವ್ಯವಾಗಿದೆ. ಭೂಕಂದಾಯ ಶಾಸನದಲ್ಲಿ ರೈತ (ಸಾಗುವಳಿದಾರ)ನ ವ್ಯಾಖ್ಯೆಯನ್ನು ಹೀಗೆ ಮಾಡಲಾಗಿದೆ. "ಬಾಯಿ ಒಡಂಬಡಿಕೆ ಅಥವಾ ಕರಾರ ಪತ್ರದ ಪ್ರಕಾರ ಭೂಮಿಯನ್ನು ಲಾವಣಿಗೆ ಯಾರಿಗೆ ಕೊಟ್ಟಿದೆಯೋ ಅವನು" ಎಂದು ಒಂದೆಡೆ ಹೇಳಿದೆ. ೮೩ ನೇ ಕಲಮಿನಲ್ಲಿ ಎರಡನೇಯವನಿಂದ (ಹೊಲದೊಡೆಯ ಸಾಗುವಳಿದಾರನೆಂಬ ನಾತೆಯ ಪ್ರಕಾರ ಹೊಲದ ಕಬಜೆಯು ಹೊಲದ ಒಡೆಯನ ಅನುಮತಿಯಿಂದ ಯಾವನ ಕಡೆಗೆ ಇರುವದೋ ಅವನು ಎಂದು ಹೇಳಲ್ಪಟ್ಟಿದೆ. ಹೊಲದೊಡೆಯನಿಂದ ಈ ಪ್ರಕಾರ ಸಾಗುವಳಿಯ ಸಲುವಾಗಿ ಹಿಡಿದ ಭೂಮಿಯ ಸಂಬಂಧವಾಗಿ ರೈತನು ಕೆಲವೊಂದು ಹಣವನ್ನಾಗಲಿ ಇಲ್ಲವೆ ಪಾಲನ್ನಾಗಲಿ ಅಥವಾ ದುಡಿತವನ್ನಾಗಲಿ ಪ್ರತಿಮೌಲ್ಯವೆಂದು ಕೊಡಬೇಕಾಗುತ್ತದೆ ಹೀಗೆ ಒಡಂಬಟ್ಟ ಲಾವಣಿಯನ್ನು ರೈತನು ಕೊಡದಿದ್ದರೆ ಅವನನ್ನು ಹೊರಗೆ ಹಾಕುವ ಅಧಿಕಾರವು ಭೂಕಂದಾಯ ಶಾಸನದಲ್ಲಿ ಮಾಲಕನಿಗೆ ಇರುತ್ತದೆ.

**ಮುಂಬಯಿ ಪ್ರಾಂತದಲ್ಲಿಯ ಹಿಡವಳಿ ಪದ್ಧತಿಗಳು**

ಮುಂಬಯಿ ಪ್ರಾಂತದಲ್ಲಿ ಭೂಮಿಯನ್ನು ಧಾರಣ ಮಾಡುವ ವಿಷಯದಲ್ಲಿ ಅನೇಕ ಹಿಡವಳಿ ಪದ್ಧತಿಗಳಿವೆ. ಇವುಗಳಲ್ಲಿ ಮುಖ್ಯವಾದವುಗಳೆಂದರೆ

(೧) ರೈತವಾರಿ, (೨) ನಿಯಂತ್ರಿತ ಹಿಡುವಳಿ, (೩) ಇನಾಮು, (೪) ತಾಲೂಕ ದಾರಿ, (೫) ಭಾಗದಾರಿ ಮತ್ತು ಸರ್ವದಾರಿ (೬) ವಂಟಾ, (೭) ಮೆಹವಾಸಿ (೮) ಮಾಲೇಕಿ (೯) ಉಧಾದ ಜಮಾಬಂದಿ (೧೦) ಖೋತಿ (೧೧) ಸಾರಾ ಕಾಟ (೧೨) ಶಿಲೋತ್ರಿ.

**ಸಂರಕ್ಷಿತ ರೈತನೆಂದರೆ ಯಾರು ?**

ಈ ಕಾಯದೆಯ ೩ ನೇ ಕಲಮಿನಲ್ಲಿ ಸಂರಕ್ಷಿತ ರೈತನ ಲಕ್ಷಣಗಳನ್ನು ಹೇಳಲಾಗಿದೆ. ೧೯೩೮ ನೇ ಇಸವಿಯ ಜಾನೇವಾರಿ ೧ ನೇ ತಾರೀಖಿಗಿಂತ ಮುಂಚೆ ಅಥವಾ ೧೯೪೫ ನೇ ಇಸವಿಯ ಜನವರಿ ೧ ನೇ ತಾರೀಖಿಗಿಂತ ಮುಂಚೆ ಒಂದೇ ಸವನೆ ಆರುವರುಷಗಳ ವರೆಗೆ ರೈತನೆಂಬ ನಾತೆಯಿಂದ ಯಾವದೊಂದು ಹೊಲವನ್ನು ಸ್ವತಃ ಯಾರು ಸಾಗುಮಾಡುತ್ತ ಬಂದಿರು ವರೋ ಅವರು ಸಂರಕ್ಷಿತ ರೈತರೆಂದು ತಿಳಿಯಬೇಕೆಂದು ಹೇಳಿದೆ. ಇದರರ್ಥ ವೇನೆಂದರೆ ೧೯೩೨ ರಿಂದ ಮತ್ತು ೧೯೩೯ ರಿಂದ ಮತ್ತು ಅದಕ್ಕಿಂತ ಮೊದಲ ನಿಂದ ಒಂದೇ ಸವನೆ ಒಂದು ಹೊಲವನ್ನು ಯಾರು ಮಾಡುತ್ತ ಬಂದಿರು ವರೋ ಅವರು ಸಂರಕ್ಷಿತ ರೈತರಾಗುವರು. ಈ ಆರು ವರ್ಷಗಳ ಅವಧಿ ಯಲ್ಲಿ ಯಾವನೊಬ್ಬ ರೈತನು ತೀರಿಕೊಂಡು ಅವನ ಮಕ್ಕಳಾಗಲಿ ಅಣ್ಣ ತಮ್ಮಂದಿರಾಗಲಿ ಆತನ ವಾರಸದಾರರೆಂಬ ರೀತಿಯಲ್ಲಿ ಹೊಲವನ್ನು ಸಾಗು ಮಾಡುತ್ತ ಬಂದಿದ್ದರೆ ಅವರು ಸಂಪೂರ್ಣ ಆರು ವರ್ಷ ತಾವೇ ಮಾಡಿರ ದಿದ್ದರೂ ತಮ್ಮ ಹಿಂದಿನವರು ಮಾಡಿದ ವರ್ಷಗಳ ಲೆಕ್ಕವನ್ನು ಆರು ವರ್ಷಗಳ ಲೆಕ್ಕಕ್ಕೆ ಹಿಡಿಯಲಿಕ್ಕೆ ಬರುತ್ತದೆ. ಉದಾಹರಣಾರ್ಥ:- "ಅ"ನು ಒಂದು ಹೊಲವನ್ನು ೧೯೩೨ ರಲ್ಲಿ ಸಾಗುವಳಿಗೆ ಹಿಡಿದು ೧೯೩೫ ರ ವರೆಗೆ ಸಾಗುವಳಿ ಮಾಡಿ ತೀರಿಕೊಂಡನೆಂದು ತಿಳಿಯೋಣ. ಮುಂದೆ 'ಅ'ನ ಮಗನಾದ 'ಬ'ನು ೧೯೩೫ ರಿಂದ ೧೯೩೮ ರ ವರೆಗೆ ಅದೇ ಹೊಲವನ್ನು ಸಾಗುಮಾಡುತ್ತ ಬಂದರೆ 'ಬ'ನಿಗೆ ಸಂರಕ್ಷಿತ ರೈತತನದ ಹಕ್ಕು ಸಿಗುತ್ತದೆ.

ಇನ್ನು ೩ ನೇ ಕಲಮಿನ ೨ ನೇ ಸ್ಪಷ್ಟೀಕರಣದ ಅರ್ಥವು ಹೀಗಿದೆ:- ಒಂದೇ ಹಳ್ಳಿಯಲ್ಲಿ ಒಬ್ಬನೇ ಮಾಲಕನ ಕಡೆಯಿಂದ ಒಬ್ಬ ರೈತನು ಕೆಲವು ವರ್ಷಗಳ ವರೆಗೆ ಒಂದು ಹೊಲವನ್ನು ಮತ್ತೆ ಕೆಲವು ವರ್ಷ ಬೇರೊಂದು ಹೊಲವನ್ನು ಮಾಡಿದರೂ ಅವೆರಡೂ ಹೊಲಗಳನ್ನು ಸಾಗುಮಾಡಿದ ಅವಧಿಯು ೧೯೩೮ ಕ್ಕೆ ಅಥವಾ ೧೯೪೫ ಕ್ಕೆ ಆರು ವರ್ಷಗಳಾಗುತ್ತಿದ್ದರೆ ಅವನಿಗೆ ಸಂರಕ್ಷಿತರೈತತನದ ಹಕ್ಕು ದೊರೆಯುತ್ತದೆ.

ಇಬ್ಬರು ಅಥವಾ ಅದಕ್ಕಿಂತ ಹೆಚ್ಚಿಗೆ ಜನರು ಕೂಡಿ ಹೊಲವನ್ನು ಸಂಯುಕ್ತ ರೀತಿಯಿಂದ ಸಾಗುಮಾಡಲು ಹಿಡಿದು ಅವರಲ್ಲಿ ಯಾವನೇ ಒಬ್ಬನು ಆ ಹೊಲವನ್ನು ಸಾಗುಮಾಡಿದರೂ ಅವರೆಲ್ಲರೂ ಸಂರಕ್ಷಿತ ರೈತ ರಾಗುವರು. ಆದರೆ ಆರು ವರ್ಷಗಳ ಏಕಪ್ರಕಾರದ ಸಾಗುವಳಿತನವು ಮಾತ್ರ ಸಿದ್ಧವಾಗಬೇಕು.

೧೯೩೭ ನೇ ಇಸವಿಯ ಎಪ್ರೇಲ ೧ ನೇ ತಾರೀಖಿಗೆ ಅಥವಾ ೧೯೪೪ನೇ ಇಸವಿಯ ಎಪ್ರೇಲ ೧ ನೇ ತಾರೀಖಿಗೆ ಮೊದಲು ಹಿಂದೆ ಆರು ವರ್ಷಗಳಿಗಿಂತ ಕಡಿಮೆಯಲ್ಲದಷ್ಟು ಅವಧಿಯ ವರೆಗೆ ಒಂದು ಹೊಲವನ್ನು ಒಂದೇ ಸವನೆ ನಿರಂತರವಾಗಿ ಸ್ವತಃ ಮಾಡುತ್ತ ಬಂದ ರೈತನು ತದನಂತರ ಬಿಡಿಸಲ್ಪಟ್ಟಿದ್ದರೆ ಅವನು ಪುನಃ ಸಂರಕ್ಷಿತ ರೈತನೆಂಬ ಹಕ್ಕಿನಿಂದ ತನ್ನ ಕೈ ಬಿಟ್ಟು ಹೋದ ಹೊಲವನ್ನು ಮರಳಿ ತನ್ನ ವಶಕ್ಕೆ ತೆಗೆದುಕೊಳ್ಳಲು ಬರುತ್ತದೆ. ಆದರೆ ಆ ಹೊಲವನ್ನು ಮಾಲಕನು ಸ್ವತಃ ತಾನೇ ಸಾಗು ಮಾಡುತ್ತಿದ್ದರೆ ಅಥವಾ ಒಕ್ಕಲತನಕ್ಕಲ್ಲದೆ ಬೇರೆ ಯಾವದಾದರೂ ಕೆಲಸಕ್ಕೆ ಆ ಹೊಲವನ್ನು ಉಪಯೋಗಿಸುತ್ತಿದ್ದರೆ ಹೊಲವನ್ನು ತಿರುಗಿ ವಶಪಡಿಸಿಕೊಳ್ಳಲು ರೈತನಿಗೆ ಬರಲಾರದು.

**ಸಂರಕ್ಷಿತ ರೈತನ ಕರ್ತವ್ಯಗಳು**

1. ಸಂರಕ್ಷಿತ ರೈತನು ತನ್ನ ಹಾಗೂ ಒಡೆಯನ ನಡುವೆ ಆದ ಒಡಂಬಡಿಕೆಯ ಪ್ರಕಾರ ಅಥವಾ ಸ್ಥಾನಿಕ ಸಂಪ್ರದಾಯ ಅಥವಾ ರೀತಿ ರಿವಾಜಿನ ಪ್ರಕಾರ ಕೊಡತಕ್ಕ ಲಾವಣಿಯನ್ನು ಸರಿಯಾಗಿ ಕೊಡಬೇಕು. ಯಾವದೇ ಒಡಂಬಡಿಕೆಯಿಲ್ಲದಿದ್ದರೆ "ಸಮಂಜಸ ಲಾವಣಿ"ಯನ್ನು ಕೊಡ ತಕ್ಕದ್ದು.

2. ೧೯೩೯ ನೇ ಇಸವಿಯ ಮಾರ್ಚ ೩೧ ನೇ ತಾರೀಖಿಗೆ ವಸೂಲಾಗತಕ್ಕ ಲಾವಣಿಯ ಬಾಕಿ ಏನಾದರೂ ಇದ್ದರೆ ಅದನ್ನು 'ಸದರೀ' ಕಾಯದೆಯು ಅಮಲಿನಲ್ಲಿ ಬಂದನಂತರ ನಾಲ್ಕು ತಿಂಗಳೊಳಗಾಗಿ ತೀರಿಸತಕ್ಕದ್ದು ಮತ್ತು ೧೯೪೫ ನೇ ಇಸವಿಯ ಮಾರ್ಚ ೧೯೩೧ ನೇ ತಾರೀಖಿಗೆ ವಸೂಲಾಗತಕ್ಕ ಲಾವಣಿಯ ಬಾಕಿಯನ್ನು ಈ 'ತಿದ್ದುಪಡೆ' ಕಾಯದೆ ಅಮಲಿನಲ್ಲಿ ಬಂದನಂತರ ಆರು ತಿಂಗಳಲ್ಲಿ ಕೊಡಬೇಕು.

3. ಪ್ರತಿವರುಷ ಆ ವರ್ಷದ ಲಾವಣಿ ಹಣವನ್ನು ಆ ವರ್ಷದ ಹಪ್ತೆಯ (ತೆರಿಗೆ) ಕಡೆಯ ಕಂತಿನ ತಾರೀಖಿನಿಂದ ೧೫ ದಿವಸಗಳೊಳಗಾಗಿ

ಒಡೆಯನಿಗೆ ಮುಟ್ಟಿಸತಕ್ಕದ್ದು ಅಥವಾ ಅಷ್ಟು ಹಣವನ್ನು ಮಾಮಲೇದಾರರ ಕಡೆಗೆ ಇಡುಗಂಟಾಗಿ ಇಡತಕ್ಕದ್ದು.

4. ಹೊಲಕ್ಕೆ ಯಾವದೇ ರೀತಿಯಿಂದ ಶಾಶ್ವತವಾದ ಅಪಾಯವಾಗದಂತೆ ಅಥವಾ ಅದಕ್ಕೆ ವಿಘಾತಕವಾಗದಂತೆ ಸಾಗುವಳಿ ಮಾಡತಕ್ಕದ್ದು.

5. ಎರಡನೇಯವರಿಗೆ ಪೋಟ ಸಾಗುವಳಿ ಮಾಡತಕ್ಕದ್ದಲ್ಲ ಮತ್ತು ಪಟ್ಟಿಗಳನ್ನು ಮಾಡತಕ್ಕದ್ದಲ್ಲ.

6. ಒಕ್ಕಲತನದ ವ್ಯತಿರಿಕ್ತ ಇತರ ಉದ್ದೇಶಕ್ಕೆ ಆ ಹೊಲವನ್ನು ಉಪಯೋಗಿಸತಕ್ಕದ್ದಲ್ಲ.

7. ಹೊಲದ ಬಾಂದು-ಕಲ್ಲುಗಳನ್ನು ದುರಸ್ತ ಇಡತಕ್ಕದ್ದು ಮತ್ತು ನಾದುರಸ್ತ ಆದ ಬಾಂದು-ಕಲ್ಲುಗಳ ವಿಷಯದಲ್ಲಿ ಕಂಡಾಯದ ಅಧಿಕಾರಿಗಳ ಬಗ್ಗೆ ಏನಾದರೂ ಖರ್ಚು ಬಂದರೆ ಅದನ್ನೆಲ್ಲ ಸಂರಕ್ಷಿತ ರೈತನೇ ಹೊರತಕ್ಕದ್ದು.

**ಸಂರಕ್ಷಿತ ರೈತನ ಹಕ್ಕುಗಳು**

1. ಮೇಲೆ ಹೇಳಿದ ಕರ್ತವ್ಯಗಳನ್ನು ಸರಿಯಾಗಿ ಪಾಲಿಸಿದರೆ ಆ ರೈತನ ಕಡೆಯಿಂದ ಹೊಲವನ್ನು ಬಿಡಿಸಲಿಕ್ಕೆ ಬರುವದಿಲ್ಲ. ಆದರೆ ಈ ನಿಯಮಕ್ಕೆ ೭ ನೇ ಕಲಮಿನಲ್ಲಿ ಕೆಲವು ಅಪವಾದಗಳನ್ನು ಹೇಳಲಾಗಿದೆ. ಹೊಲದ ಒಡೆಯನಿಗೆ ಆ ಹೊಲವು ಸ್ವತಃ ಸಾಗುಮಾಡಲಿಕ್ಕೆ ಬೇಕಾಗಿದ್ದರೆ ಅಥವಾ ಒಕ್ಕಲತನದ ವ್ಯತಿರಿಕ್ತ ಬೇರೆ ಯಾವದಾದರೂ ಕೆಲಸಕ್ಕೆ ಅಂದರೆ ಪ್ಲಾಟ ಮಾಡಿ ಮಾರಲಿಕ್ಕೆ ಅಥವಾ ಗಿರಣಿ ಹಾಕಲಿಕ್ಕೆ ಅಥವಾ ಇನ್ನಿತರ ಇದೇ ಮಾದರಿಯ ಕೆಲಸಕ್ಕೆ ಆ ಹೊಲವು ಬೇಕಾಗಿದ್ದರೆ ಆಗ ಸಂರಕ್ಷಿತ ರೈತನು ತನ್ನ ಪಾಲಿನ ಎಲ್ಲ ಕರ್ತವ್ಯಗಳನ್ನು ಸರಿಯಾಗಿ ಪಾಲಿಸಿದರೂ ಅವನಿಂದ ಹೊಲವನ್ನು ಬಿಡಿಸಲಿಕ್ಕೆ ಬರುತ್ತದೆ. ಆದರೆ ಹೀಗೆ ಬಿಡಿಸಿದ ಹೊಲವನ್ನು ಆ ತಾರೀಖಿನಿಂದ ೧ ವರ್ಷದ ಒಳಗಾಗಿ ಆ ಉದ್ದೇಶಕ್ಕೆ ಉಪಯೋಗಿಸದಿದ್ದರೆ ಅಥವಾ ಮುಂದೆ ೧೨ ವರ್ಷಗಳೊಳಗಾಗಿ ಆ ಉದ್ದೇಶದ ಸಲುವಾಗಿ ಉಪಯೋಗಿಸುತ್ತಿದ್ದುದನ್ನು ಬಿಟ್ಟರೆ ಪುನಃ ಮೊದಲಿನ ರೈತನಿಗೆ ಮೊದಲಿನ ಕರಾರುಗಳ ಪ್ರಕಾರ ಸಾಗುವಳಿಗೆ ಸದರೀ ಭೂಮಿಯ ಕಬಜೆಯನ್ನು ಕೊಡತಕ್ಕದ್ದು. ಆದರೆ ಸಾಗುವಳಿದಾರನೇ ಬರಹ ಮೂಲಕವಾಗಿ ಹೀಗೆ ಹಿಡಿಯಲು ನಿರಾಕರಿಸಿದರೆ ಅಥವಾ ಒಡೆಯನು ನೋಟೀಸು

ಕೊಟ್ಟು ಮೂರು ತಿಂಗಳುಗಳೊಳಗಾಗಿ ರೈತನು ಹಿಡಿಯದಿದ್ದರೆ ಕಬಜೆ ಕೊಡುವ ಕಾರಣವಿಲ್ಲ.

2. ಸಂರಕ್ಷಿತ ರೈತನು ಮಾಮಲೇದಾರರ ಕಡೆಗೆ ಅರ್ಜಿಯನ್ನು ಮಾಡಿ ಹೊಲದೊಡೆಯನು ವಿನಾಕಾರಣ ತನ್ನ ವಶದಲ್ಲಿದ್ದ ಹೊಲವನ್ನು ಬಿಡಿಸಿದನೆಂದೂ ೭ ನೇ ಕಲಮಿನ ೧ ನೇ ಉಪಕಲಮಿನಲ್ಲಿ ಹೇಳಿದ ಉದ್ದೇಶಗಳಿಗೆ ಅಂದರೆ ಸ್ವತಃ ಸಾಗುವಳಿ ಮಾಡಲಿಕ್ಕೆ ಅಥವಾ ಒಕ್ಕಲತನಕ್ಕಲ್ಲದ ಇತರ ಉದ್ದೇಶಕ್ಕೆ ಹೊಲವು ಬೇಕಾಗಿದ್ದಿಲ್ಲೆಂದೂ ಸಿದ್ಧಮಾಡಿ ತೃಪ್ತಿಕರವಾಗುವಂತೆ ತೋರಿಸಿಕೊಟ್ಟರೆ ಆ ಹೊಲದೊಡೆಯನ ಕಡೆಯಿಂದ ರೈತನಿಗೆ ಪರಿಹಾರ ಧನ (ಈಡುಹಣ) ವನ್ನು ಕೊಡಿಸಲಿಕ್ಕೆ ಬರುತ್ತದೆ.

3. ಹೊಲವೊಡೆಯನು ರೈತತನವನ್ನು ಕೊನೆಗಾಣಿಸುವ ಕುರಿತು ನೋಟೀಸು ಕೊಡುವ ಮೊದಲೇ ಸಂರಕ್ಷಿತ ರೈತನು ತನ್ನ ಖರ್ಚಿನಿಂದ ಹೊಲದಲ್ಲಿ ಏನಾದರೂ ಸುಧಾರಣೆಗಳನ್ನು ಮಾಡಿದ್ದರೆ ಅವುಗಳ ಬಗ್ಗೆ ಒಡೆಯನಿಂದ ಪರಿಹಾರ ಧನವನ್ನು ಬೇಡಲು ಸಂರಕ್ಷಿತ ರೈತನಿಗೆ ಹಕ್ಕು ಇರುತ್ತದೆ.

4. ಹೊಲದೊಡೆಯನಿಗೆ ತಾನು ಸಲ್ಲಿಸಿದ ಲಾವಣಿ ಹಣದ ಬಗ್ಗೆ ಆತನ ಕಡೆಯಿಂದ ಲೇಖೀ ಪಾವತಿಯನ್ನು ಬೇಡುವ ಹಕ್ಕು ಸಂರಕ್ಷಿತ ರೈತನಿಗೆ ಇರುತ್ತದೆ.

5. ಸಂರಕ್ಷಿತ ರೈತನಾವನಾದರೂ ಸತ್ತರೆ ಅವನ ವಾರಸದಾರರು ಅವೇ ಶರ್ತು ಕರಾರುಗಳ ಪ್ರಕಾರ ಹೊಲದ ಸಾಗುವಳಿಯನ್ನು ಮಾಡಲು ತಮ್ಮ ಒಪ್ಪಿಗೆಯಿದೆಯೆಂದು ಆತನ ಮರಣದ ನಂತರ ನಾಲ್ಕು ತಿಂಗಳೊಳಗಾಗಿ ಲೇಖೀ ನೋಟೀಸು ಕೊಟ್ಟು ತಿಳಿಸಿದರೆ ಹೊಲದೊಡೆಯನು ಸಾಗುವಳಿದಾರತನದ ಹಕ್ಕನ್ನು ಮುಂದಿನವರಿಗೆ ಸಾಗಿಸಲಿಕ್ಕೆಬೇಕು. ಸತ್ತ ಸಂರಕ್ಷಿತ ರೈತನ ವಾರಸದಾರರು ಇಬ್ಬರು ಅಥವಾ ಹೆಚ್ಚಿಗೆ ಇದ್ದರೆ ಅವರೆಲ್ಲರೂ ಕೂಡಿ ತಮ್ಮೊಳಗಿನ ಇಂಥವನೊಬ್ಬನಿಗೆ ಸಾಗುಮಾಡಲಿಕ್ಕೆ ಹೊಲವನ್ನು ಕೊಡಬೇಕೆಂದು ಹೊಲದೊಡೆಯನಿಗೆ ಬರಹದ ಮೂಲಕ ಆರು ತಿಂಗಳುಗಳೊಳಗಾಗಿ ತಿಳಿಸಿದರೆ ಅಂಥವನಿಗೆ ಕೊಡಬೇಕು. ಹೀಗೆ ಅವರು ತಿಳಿಸದಿದ್ದರೆ ಹೊಲದೊಡೆಯನ ಸಲಹೆ ಪಡೆದು ಕಲೆಕ್ಟರನು ಯಾವನಿಗೆ ಸಾಗಿಸಬೇಕೆಂದು ಹೇಳುವನೋ ಅವನಿಗೆ ಸಾಗಿಸಬೇಕು.

6. ಈ ಕಾಯದೆಯು ಬಳಕೆಯಲ್ಲಿ ಬರುವ ಪೂರ್ವದಲ್ಲಿ ಸಂರಕ್ಷಿತ

ರೈತನಾಗಲಿ ಇಲ್ಲವೆ ಇತರೆ ರೈತನಾಗಲಿ ಹೊಲದಲ್ಲಿ ಗಿಡಗಳನ್ನು ಹಚ್ಚಿದ್ದರೆ ತನ್ನ ಸಾಗುವಳಿದಾರತನವು ಇರುವಾಗ ಆ ಗಿಡಗಳ ಕಟ್ಟಿಗೆಯ ಮಟ್ಟಿಗೆ ಮತ್ತು ಅವುಗಳ ಹಣ್ಣು ಹಂಪಲಗಳಿಗೆ ಹಕ್ಕದಾರನಿರುತ್ತಾನೆ. ಮತ್ತು ಸಾಗುವಳಿದಾರತನವು ಕೊನೆಗಂಡರೆ ಮಾಮಲೇದಾರರು ನಿರ್ಣಯಿಸುವ ನಷ್ಟಪರಿಹಾರ ದ್ರವ್ಯ ಅಥವಾ ಈಡು ಹಣವನ್ನು ದೊರಕಿಸುವ ಹಕ್ಕುಂಟು.

7. ಲಾವಣಿ ಹಣವನ್ನು ಕೊಡದೆ ಇದ್ದ ಪರಿಂದ ಹೊಲದೊಡೆಯನು ರೈತನನ್ನು ಬಿಡಿಸಿದರೆ ಮತ್ತು ಆ ಹಣದ ಬಗ್ಗೆ ಏನಾದರೂ ದಾವೆಯನ್ನು ಮಾಡಿದರೆ ಆ ದಾವೆ ಅಥವಾ ವ್ಯವಹಾರವು ಇನ್ನೂ ವಿಚಾರಣಾವಸ್ಥೆಯಲ್ಲಿರುವಾಗ ರೈತನು ಲಾವಣಿ ಹಣದ ಬಾಕಿಯನ್ನು ಕೋರ್ಟ ಖರ್ಚುಸಹಿತ ಕೊಟ್ಟರೆ ಅಥವಾ ಆ ಹಣವನ್ನು ೧೫ ದಿನಗಳಲ್ಲಿ ಕೊಡುವ ಬಗ್ಗೆ ಯೋಗ್ಯ ಜಾಮೀನು ಕೊಟ್ಟರೆ ಆ ರೈತನಿಗೆ ಪುನಃ ರೈತತನದ ಹಕ್ಕು ಸಿಗುತ್ತದೆ.

8. ಹೊಲಕ್ಕೆ ಏನಾದರೂ ರೈತನು ಅಪಾಯ ಮಾಡಿದರೆ ಆ ಅಪಾಯವನ್ನು ತೋರಿಸಿ ಒಡೆಯನು ನೋಟೀಸು ಕೊಟ್ಟ ಬಳಿಕ ರೈತನು ಒಂದು ವರ್ಷದೊಳಗಾಗಿ ಅವನ್ನು ಸರಿಪಡಿಸಿದರೆ ರೈತತನದ ಹಕ್ಕು ನಷ್ಟವಾಗುವದಿಲ್ಲ.

9. ಈ ಕಾಯದೆಯು ಅಮಲಿನಲ್ಲಿ ಬಂದ ಮೇಲೆ ಯಾವದಾದರೊಂದು ಹೊಲವನ್ನು ಲಾವಣಿಗೆ ಅಥವಾ ಬೇರೆ ರೀತಿಯಿಂದ ಸಾಗುವಳಿ ಮಾಡಲು ರೈತನಿಗೆ ಕೊಟ್ಟರೆ ೧೦ ವರ್ಷಗಳಿಗಿಂತ ಕಡಿಮೆಯಲ್ಲದಷ್ಟು ಅವಧಿಯ ವರೆಗೆ ಅದನ್ನು ಅವನು ಸಾಗುವಳಿ ಮಾಡಲು ಹಕ್ಕದಾರನಾಗುತ್ತಾನೆ. ಮತ್ತು ಈ ತಿದ್ದುಪಡಿ ಕಾಯದೆಯು ಬಳಕೆಯಲ್ಲಿ ಬರುವದಕ್ಕಿಂತ ಮೊದಲಿದ್ದ ಕಬುಲಾಯತಿಯು ಕೂಡ ಅದರಲ್ಲಿಯ ಅವಧಿ ಮುಗಿದಿದೆ ಯೆಂಬ ಒಂದೇ ಕಾರಣದಿಂದ ರದ್ದಾಗಲಾರದು. ಅದು ಸಹ ೧೦ ವರ್ಷಗಳ ವರೆಗೆ ಎಂದು ತಿಳಿಯಲ್ಪಡುವದು.

10. ಮಾಮಲೇದಾರನ ಹುಕುಮಿಲ್ಲದೆ ಯಾವನೇ ಒಡೆಯನು ರೈತನ ಕಡೆಯಿಂದ ಹೊಲವನ್ನು ಬಿಡಿಸಿ ಕಬಜೆ ಪಡೆಯಲಾರನು.

**ಹೊಲದೊಡೆಯನ ಹಕ್ಕುಗಳು**

1. ತನ್ನ ಹಾಗೂ ರೈತನ ನಡುವೆ ಆದ ಒಡಂಬಡಿಕೆಯ ಪ್ರಕಾರ ಲಾವಣಿಯನ್ನು ಸ್ವೀಕರಿಸುವ ಹಕ್ಕು ಒಡೆಯನಿಗಿರುತ್ತದೆ.

2. ಸಂರಕ್ಷಿತ ರೈತತನದ ಹಕ್ಕನ್ನು ಕೊನೆಗಾಣಿಸಲು ಕೆಳಗಿನ ಸಂದರ್ಭಗಳಲ್ಲಿ ಹೊಲದೊಡೆಯನಿಗೆ ಹಕ್ಕು ಉಂಟಾಗುತ್ತದೆ.

(ಅ) ಸ್ವತಃ ಸಾಗಮಾಡಲಿಕ್ಕೆ ಹೊಲವು ಬೇಕಾದರೆ, ಅಥವಾ,

(ಬ) ಒಕ್ಕಲತನಕ್ಕಲ್ಲದೆ ಬೇರೆ ಉಪಯೋಗಕ್ಕೆ ಹೊಲವು ಬೇಕಾದರೆ

(ಕ) ರೈತನು ಹೊಲವನ್ನು ಕೆಡಿಸಿದರೆ,

(ಡ) ರೈತನು ಪೋಟಸಾಗುವಳಿಗೆ ಹೊಲವನ್ನು ಬೇರೊಬ್ಬರಿಗೆ ಸಾಗಿಸಿದರೆ, ಮತ್ತು ಸಾಗುವಳಿಗೆ ಹಿಡಿದ ಹೊಲದಲ್ಲಿ ಪಟ್ಟಿಗಳನ್ನು ಮಾಡಿದರೆ

(ಈ) ಒಡಂಬಡಿಕೆಯಾದರೆ ಲಾವಣಿಯನ್ನು ಆ ವರ್ಷ ಭೂಕಂದಾಯ ವಸೂಲಿಯ ೩ ನೇ ಕಂತಿನ ತಾರೀಖಿನಿಂದ ೧೫ ದಿವಸಗಳೊಳಗಾಗಿ ಒಡೆಯನಿಗೆ ರೈತನು ಮುಟ್ಟಿಸದಿದ್ದರೆ.

**ಹೊಲದೊಡೆಯನ ಕರ್ತವ್ಯಗಳು**

1. ರೈತನು ಲಾವಣಿಯ ಹಣವನ್ನು ತಂದುಕೊಟ್ಟರೆ ಆ ಬಗ್ಗೆ ಲೇಖೀ ಪಾವತಿಯನ್ನು ಕೊಡಲಿಕ್ಕೆಬೇಕು. ಕೊಡದಿದ್ದರೆ ೧೦೦ ರೂ. ಗಳವರೆಗೆ ದಂಡವಾಗುವದು.

2. ಹೊಲದೊಡೆಯನು ಯಾವದೊಂದು ಹೊಲದ ವಿಷಯದಲ್ಲಿ ರೈತನಿಂದ ಕಾಯದೇಶೀರ ಬರತಕ್ಕ ಲಾವಣಿಯ ಹೊರತು ಹೆಚ್ಚಿಗೆ ಯಾವದೇ ತರದ ಸುಂಕ, ದರ, ಕರ, ಅಥವಾ ಯಾವದೇ ಬಗೆಯ ಸೇವೆಯನ್ನು ಅವನ ಕಡೆಯಿಂದ ಸ್ವೀಕರಿಸತಕ್ಕದ್ದಲ್ಲ.

3. ಸಂರಕ್ಷಿತ ರೈತತನದ ಹಕ್ಕನ್ನು ಕೊನೆಗಾಣಿಸಿ ತನ್ನ ಹೊಲವನ್ನು ಸ್ವತಃ ಸಾಗುವಳಿ ಮಾಡಲು ಒಡೆಯನು ತೆಗೆದುಕೊಳ್ಳಬೇಕೆಂದು ಬಯಸಿದರೆ ಅದರಂತೆ ರೈತನಿಗೆ ಒಂದು ವರ್ಷ ಮೊದಲೇ ಲೇಖೀ ನೋಟೀಸನ್ನು ಕೊಡತಕ್ಕದ್ದು.

4. ಹೊಲದೊಡೆಯನು ಸ್ವತಃ ಸಾಗುಮಾಡಲಿಕ್ಕೆಂದು ಹೇಳಿ ಸಂರಕ್ಷಿತ ರೈತನ ಕಡೆಯಿಂದ ಹೊಲವನ್ನು ಬಿಡಿಸಿಕೊಂಡ ಬಳಿಕ ೧ ವರ್ಷದೊಳಗಾಗಿ ಅದರಂತೆ ಸ್ವತಃ ಸಾಗುಮಾಡಲಿಕ್ಕೆಬೇಕು.

5. ಹೀಗೆ ಸ್ವತಃ ಸಾಗುಮಾಡಹತ್ತಿದ ಮೇಲೆ ೧೨ ವರ್ಷಗಳವರೆಗೆ ಸ್ವತಃ ಸಾಗಮಾಡಲಿಕ್ಕೆ ಬೇಕು. ಮಧ್ಯಂತರದಲ್ಲಿ ಸ್ವತಃ ಸಾಗುಮಾಡುವದನ್ನು ಬಿಟ್ಟರೆ ಮೊದಲಿದ್ದ ರೈತನು ಮೊದಲಿನ ಕರಾರುಗಳ

ಪ್ರಕಾರ ಪುನಃ ಹೊಲವನ್ನು ಲಾವಣಿಯಿಂದ ಹಿಡಿಯಲೊಪ್ಪಿದರೆ ಹೊಲ ದೊಡೆಯನು ಆ ಹೊಲವನ್ನು ಅವನಿಗೆ ಸಾಗುವಳಿಗೆ ಕೊಡಲಿಕ್ಕೆಬೇಕು.

6. ಈ ಕಾಯದೆಯು ಅಮಲಿನಲ್ಲಿ ಬಂದ ಬಳಿಕ ಹೊಲದೊಡೆಯನು ರೈತನಿಗೆ ಸಾಗುವಳಿಯ ಸಲುವಾಗಿ ಹೊಲವನ್ನು ಕೊಡುವದಾದರೆ ೧೦ ವರ್ಷಗಳಿಗಿಂತ ಕಡಿಮೆ ಅವಧಿಯ ವರೆಗೆ ಕೊಡಲಿಕ್ಕೆ ಬರುವದಿಲ್ಲ.

7. ಯಾವದೇ ಕಾರಣದಿಂದ ಸರಕಾರೀ ಹಸ್ತೆಯು (ಭೂಕಂದಾಯವು) ಸಂಪೂರ್ಣ ತಹಕೂಪ ಅಥವಾ ಸೂಟಾದರೆ ಹೊಲದೊಡೆಯನು ಆ ವರ್ಷ ಆ ಹೊಲದ ಲಾವಣಿಯನ್ನು ರೈತನಿಂದ ವಸೂಲ ಮಾಡತಕ್ಕದ್ದಲ್ಲ. ಅದೇ ಪ್ರಕಾರ ಅಂಶತಃ ತಹಕೂಪ ಅಥವಾ ಸೂಟಾಗಿದ್ದರೆ ಅದೇ ಪ್ರಮಾಣದಲ್ಲಿ ರೈತನಿಂದ ಆ ವರ್ಷ ಹೊಲದ ಲಾವಣಿಯ ವಸೂಲ ಮಾಡಕೂಡದು. ಆದರೆ ಬೆಳೆಗಳಲ್ಲಿ ಪಾಲಿರುವ ಸಂದರ್ಭದಲ್ಲಿ ಹೊಲದೊಡೆಯನು ತಹಕೂಪ ಅಥವಾ ಸೂಟ ಮಾಡಲಿಕ್ಕೆ ಬದ್ಧನಿಲ್ಲ.

**ಮೂರನೇ ಮತ್ತು ನಾಲ್ಕನೇ ಪ್ರಕರಣಗಳ ವಿವರಣೆ.**

ಮೂರನೇ ಪ್ರಕರಣದಲ್ಲಿ ಸಾಮಾನ್ಯ ರೈತ ವರ್ಗವನ್ನು ಕುರಿತು ಕೆಲವು ಮಾತುಗಳನ್ನು ಹೇಳಲಾಗಿದೆ. ಅವುಗಳ ಮುಖ್ಯ ತಾತ್ಪರ್ಯವನ್ನು ಇಲ್ಲಿ ಕೊಟ್ಟಿದೆ.

ರೈತನು ಹೊಲದೊಡೆಯನಿಗೆ ತಾನು ಹಿಡಿದ ಹೊಲದ ಬಗ್ಗೆ ಕಾಯದೇಶೀರ ಕೊಡಬೇಕಾದ ಲಾವಣಿಯ ಹೊರತು ಯಾವದೇ ತರದ ಇತರ ಸುಂಕ, ಬಿಟ್ಟಿ, ಕರ, ಮೊದಲಾದವುಗಳನ್ನು ಕೊಡಲು ಬದ್ಧನಿಲ್ಲ. ಈ ಬಗ್ಗೆ ಕಬುಲಾಯತಿಯಲ್ಲಿ ಕರಾರುಗಳನ್ನು ಬರೆಸಿಕೊಳ್ಳಲು ಒಡೆಯನಿಗೆ ಬರಲಾರದು. ಒಂದು ವೇಳೆ ಹಾಗೆ ಏನಾದರೂ ಬರೆಸಿಕೊಂಡು ಆ ಪ್ರಕಾರ ಸುಂಕ ಮೊದಲಾದವುಗಳನ್ನು ವಸೂಲ ಮಾಡಿದರೆ ಹೊಲದೊಡೆಯನು ೧೦೦೦ರೂ. ಗಳ ವರೆಗೆ ದಂಡಕ್ಕೆ ಗುರಿಯಾಗುವನು.

**ಸರಕಾರದ ಅಧಿಕಾರ**

ಯಾವ ಯಾವ ಭಾಗದಲ್ಲಿ ಎಷ್ಟೆಷ್ಟು ಲಾವಣಿಯನ್ನು ತೆಗೆದುಕೊಳ್ಳಬಹುದೆಂಬುದರ ಪರಮಾವಧಿಯನ್ನು ಗೊತ್ತುಪಡಿಸುವ ಅಧಿಕಾರವು ಪ್ರಾಂತಿಕ ಸರಕಾರಕ್ಕಿರುತ್ತದೆ. ಪ್ರಾಂತಿಕ ಸರಕಾರದವರು ಆ ಪ್ರಕಾರ ಗ್ಯಾಜಿಟ್ಟಿನಲ್ಲಿ ಪ್ರಕಟನೆಯನ್ನು ಹೊರಡಿಸಿ ವಿಶಿಷ್ಟ ವಿಭಾಗಕ್ಕೆ ಅಲ್ಲಿಯ ಇಂತಿಷ್ಟಕ್ಕಿಂತ ಹೆಚ್ಚಿಗೆ ಲಾವಣಿಯನ್ನು ತೆಗೆದುಕೊಳ್ಳಬಾರದೆಂದು ಪ್ರತಿ

ಬಂಧ ಮಾಡಬಹುದು. ಈ ಪ್ರಕಾರ ಈಗ ಮುಂಬಯಿ ಪ್ರಾಂತದಲ್ಲಿಲ್ಲ ಒಡೆಯನು ನೀರಾವರಿ ಹೊಲಗಳಲ್ಲಿ ಬೆಳೆಯ ಅಥವಾ ಅದರ ಬೆಲೆಯ ಒಂದು ನಾಲ್ಕಾಂಶಕ್ಕಿಂತ ಹೆಚ್ಚಿಗಲ್ಲದಷ್ಟು ಮತ್ತು ಇತರ ಹೊಲಗಳಲ್ಲಿ ಒಂದು ಮೂರಾಂಶಕ್ಕಿಂತ ಹೆಚ್ಚಿಗಲ್ಲದಷ್ಟು ಅಥವಾ ಮೇಲಿನ ಪರಮಾವಧಿಗೊಳ ಪಟ್ಟು ಒಡೆಯ - ರೈತನ ನಡುವೆ ಆದ ಒಡಂಬಡಿಕೆಯ ಪ್ರಕಾರ ಗೊತ್ತಾದಷ್ಟು ಮಾತ್ರ ಇದರಲ್ಲಿ ಯಾವುದು ಕಡಿಮೆಯಿದೆಯೋ ಅದನ್ನು ಲಾವಣಿ ಪಡೆಯಬಹುದೆಂದು ಮುಂಬಯಿ ಸರಕಾರವು ಆಜ್ಞೆ ಹೊರಡಿಸಿದೆ.

## ಸೂಟ ತಹಕೂಪಗಳ ವಿಚಾರ

ಸರಕಾರಕ್ಕೆ ಸಲ್ಲುವ ಕಂದಾಯವನ್ನು ಬರಗಾಲವ ಮೂಲಕ ಅಥವಾ ಇತರ ಯಾವದೇ ಕಾರಣದ ಮೂಲಕ ಸೂಟ ಬಿಟ್ಟರೆ ಆ ವರ್ಷದ ಲಾವಣಿ ಯನ್ನು ರೈತನ ಕಡೆಯಿಂದ ಒಡೆಯನು ವಸೂಲ ಮಾಡತಕ್ಕದ್ದಲ್ಲ. ಕಂದಾ ಯವು ತಹಕೂಪಾದರೆ ತಾನೂ ಲಾವಣಿಯನ್ನು ತಹಕೂಪ ಮಾಡಬೇಕು. ಯಾವ ಪ್ರಮಾಣದಲ್ಲಿ ಕಂದಾಯವು ತಹಕೂಪಾಗಿದೆಯೋ ಅದೇ ಪ್ರಮಾಣದಲ್ಲಿ ಲಾವಣಿಯಾದರೂ ತಹಕೂಪಾಗುವದು. ಉದಾ:— ಒಂದು ರೂಪಾಯಿ ಕಂದಾಯದಲ್ಲಿ ಎಂಟಾಣೆ ತಹಕೂಪಾದರೆ ರೈತನ ಕಡೆಯಿಂದ ಒಡೆಯನಿಗೆ ಸಲ್ಲತಕ್ಕ ಲಾವಣಿಯಲ್ಲಿ ಅರ್ಧ ತಹಕೂಪಾಗು ವದು. ಸೂಟ ಅಥವಾ ತಹಕೂಪಾದ ಲಾವಣಿಯ ಹಣದ ಬಗ್ಗೆ ಮುದತಿ ದಾವೆ ಮಾಡಲಿಕ್ಕೆ ಬರಲಾರದು.

## ಗ್ರಾಮಗಳಲ್ಲಿಯ ಮನೆಯ ಬಾಡಿಗೆದಾರರು

ಯಾವದೇ ಹಳ್ಳಿಯಲ್ಲಿ ಒಡೆಯನ ಸ್ಥಳದ ಮೇಲೆ ಅಲ್ಲಿಯ ರೈತನು ಅಥವಾ ಅವನ ಪೂರ್ವಜನು ತನ್ನ ಖರ್ಚಿನಿಂದ ಮನೆಯನ್ನು ಕಟ್ಟಿಸಿದ್ದರೆ ಅವನು ರೀತಿಯ ಪ್ರಕಾರ ಕೊಡಬೇಕಾದ ನೆಲಬಾಡಿಗೆಯನ್ನು ಸರಿಯಾಗಿ ತಪ್ಪದೆ ಕೊಡುತ್ತ ಬಂದರೆ ಅವನನ್ನು ಮನೆ ಬಿಡಿಸಿ ಹೊರಗೆ ಹಾಕಲಿಕ್ಕೆ ಒಡೆಯನಿಗೆ ಬರಲಾರದು. ಒಂದು ವೇಳೆ ಹೊರಗೆ ಹಾಕಬೇಕೆಂಬ ಇಚ್ಛೆ ಯಾದರೆ ರೈತನು ತನ್ನ ಖರ್ಚಿನಿಂದ ಮನೆಯನ್ನು ಕಟ್ಟಿಸಿಲ್ಲೆಂಬುದನ್ನು ಸಿದ್ಧ ಮಾಡಬೇಕು. ಅಥವಾ ಬಾಡಿಗೆಯನ್ನು ಸರಿಯಾಗಿ ಕೊಡಲು ತಪ್ಪಿ ರುವನೆಂದು ಸಿದ್ಧಮಾಡಬೇಕು. ಆದರೆ ಒಕ್ಕಲುತನದ ಸಲುವಾಗಿ ಉಪ ಯೋಗ ಮಾಡುವ ಹೊಲದಲ್ಲಿ ಏನಾದರೂ ಮನೆಯನ್ನು ಕಟ್ಟಿಸಿದ್ದರೆ ಆ ಮನೆಗೆ ಈ ಕಲಮು ಹತ್ತುವದಿಲ್ಲ. ತನ್ನ ಒಡೆತನದಲ್ಲಿದ್ದ ಜಾಗೆಯನ್ನು

ಮಾರಬೇಕೆಂದು ಒಡೆಯನಿಗೆ ಅನಿಸಿದರೆ ಆ ಜಾಗೆಯ ಮೇಲೆ ಮನೆಯನ್ನು ಕಟ್ಟಿಸಿಕೊಂಡ ರೈತನಿಗೆ ಅದನ್ನು ಮೊದಲು ಖರೀದಿ ತೆಗೆದುಕೊಳ್ಳುವ ಐಚ್ಛಿಕ ಹಕ್ಕು ಇರುತ್ತದೆ. ಆದರೆ ಆ ಸ್ಥಳವನ್ನು ಮಾರಬೇಕೆನ್ನುವ ಮಾಲಕನು ಮೊದಲು ಬಾಡಿಗೆದಾರನಿಗೆ ನೋಟೀಸು ಕೊಟ್ಟು ೩ ತಿಂಗಳಲ್ಲಿ ತನ್ನ ಇಚ್ಛೆಯನ್ನು ತಿಳಿಸಲು ಹೇಳಬೇಕು. ಈ ಅವಧಿಯಲ್ಲಿ ಬಾಡಿಗೆ ದಾರನು ಕೊಂಡುಕೊಳ್ಳುವ ತನ್ನ ಇಚ್ಛೆಯನ್ನು ತಿಳಿಸಿದರೆ ಒಡೆಯನು ಮಾಮಲೇದಾರರ ಕಡೆಗೆ ಅದರ ಕಿಮ್ಮತ್ತನ್ನು ನಿರ್ಧರಿಸಲು ವಿನಂತಿಸಿ ಕೊಳ್ಳಬೇಕು. ಮಾಮಲೇದಾರರು ಬಾಡಿಗೆದಾರನಿಗೆ ನೋಟೀಸು ಕೊಟ್ಟು ಎಲ್ಲ ವಿಷಯಗಳ ಚೌಕಶಿಯನ್ನು ಮಾಡಿ ಅದರ ಬೆಲೆಯನ್ನು ಗೊತ್ತುಪಡಿಸ ತಕ್ಕದ್ದು. ಹೀಗೆ ಮೂರು ತಿಂಗಳ ಅವಧಿಯಲ್ಲಿ ಬಾಡಿಗೆದಾರನು ತನ್ನ ಮನೋಗತವನ್ನು ತಿಳಿಸದಿದ್ದರೆ ಅವನು ತನ್ನ ಮೊದಲು ಕೊಳ್ಳುವ ಹಕ್ಕನ್ನು ಬಿಟ್ಟು ಕೊಟ್ಟಿದ್ದಾನೆಂದು ತಿಳಿದು ಎರಡನೇಯವರಿಗೆ ಅದನ್ನು ಮಾರಬಹುದು. ಎರಡನೆಯವರಿಗೆ ಆ ಸ್ಥಳವನ್ನು ಮಾರಿದ ಬಳಿಕ ಬಂದ ಹಣದೊಳಗಿಂದ ಮೊದಲಿನ ಬಾಡಿಗೆದಾರನಿಗೆ ಅವನು ಕಟ್ಟಿಸಿದ ಕಟ್ಟಡದ ಬಗ್ಗೆ ಮಾಮಲೇದಾರರು ಗೊತ್ತುಪಡಿಸುವ ಪ್ರತಿಧನವನ್ನು ಕೊಡಬೇಕು.

## ಗಿಡಗಳ ಬಗ್ಗೆ ದೊರೆಯುವ ಈಡು ಹಣ

ಈ ಕಾಯಿದೆಯು ಅಮಲಿನಲ್ಲಿ ಬರುವದಕ್ಕಿಂತ ಮೊದಲು ಅಥವಾ ನಂತರ ಯಾವನೇ ರೈತನು ತಾನು ಸಾಗುಮಾಡಲಿಕ್ಕೆ ಹಿಡಿದ ಹೊಲದಲ್ಲಿ ಗಿಡಗಳನ್ನು ಹಚ್ಚಿದ್ದರೆ ಆ ಗಿಡಗಳ ಉತ್ಪನ್ನಕ್ಕೆ ಮತ್ತು ಅದರ ಕಟ್ಟಿಗೆ ಕಾವಲಗಳಿಗೆ ಸಾಗುವಳಿದಾರತನವು ಇರುವವರೆಗೆ ಹಕ್ಕುದಾರನಿರುತ್ತಾನೆ. ಮತ್ತು ಸಾಗುವಳಿದಾರತನವು ಮುಗಿದ ಬಳಿಕ ಮಾಮಲೇದಾರರು ನಿರ್ಣಯಿಸುವ ಈಡು ಹಣವನ್ನು ಆ ಗಿಡಗಳ ಬಗ್ಗೆ ಪಡೆಯಲು ಅವನಿಗೆ ಅಧಿಕಾರವಿರುತ್ತದೆ. ಸಾಗುವಳಿದಾರತನವನ್ನು ರೈತನು ತಾನಾಗಿಯೇ ಬಿಟ್ಟು ಕೊಟ್ಟರೆ ಆಗ ಅವನಿಗೆ ಗಿಡಗಳ ಬಗ್ಗೆ ಈಡುಹಣ ಸಿಗಲಾರದು.

## ಕಬಜೆಯನ್ನು ಪಡೆಯುವ ಕ್ರಮ

ಯಾವದೇ ಹೊಲದ ಅಥವಾ ಮನೆಯ ಕಬಜೆಯನ್ನು ಈ ಕಾಯದೆಯ ಪ್ರಕಾರ ಪಡೆಯುವ ಹಕ್ಕುಳ್ಳವರು ಯಾವ ಮಾಮಲೇದಾರರ ಅಧಿಕಾರ ಕ್ಷೇತ್ರದಲ್ಲಿ ಆ ಹೊಲ ಅಥವಾ ಮನೆಯು ಇರುವದೋ ಆ ಮಾಮಲೇದಾರರ ಕಡೆಗೆ ತಮ್ಮ ಅರ್ಜಿಯನ್ನು ಕೊಡತಕ್ಕದ್ದು. ಹೀಗೆ ಬಂದ ಅರ್ಜಿ

ಯನ್ನು ಮಾಮಲೇದಾರರು ವಿಚಾರ ಮಾಡಿ ತಮಗೆ ಸರಿದೋರಿದಂತೆ ಹುಕುಮು ಮಾಡಬೇಕು. ಮಾಮಲೇದಾರರ ಹುಕುಮಿನಿಂದ ಯಾರಿಗೆ ವ್ಯಸನವಾಗುವದೋ ಅವರು ಕಲೆಕ್ಟರ ಸಾಹೇಬರ ಕಡೆಗೆ ಅಪೀಲ ಮಾಡ ತಕ್ಕದ್ದು. ಹೀಗೆ ಕಲೆಕ್ಟರರು ಅಪೀಲಿನಲ್ಲಿ ಮಾಡಿದ ಹುಕುಮು ಅಥವಾ ಮಾಮಲೇದಾರರು ಮಾಡಿದ ಹುಕುಮಾಗಲಿ ದಿವಾಣಿ ಕೋರ್ಟಿನ ಹುಕುಮನಾಮೆಯೆಂದು ಭಾವಿಸಲ್ಪಟ್ಟು ಅದರಂತೆ ಬಜಾಯಿಸಲ್ಪಡತಕ್ಕದ್ದು.

**ಕೆಲವು ಭೂಮಿಗಳಿಗೆ ಈ ಕಾಯದೆಯು ಹತ್ತುವದಿಲ್ಲ.**

ಸಾರ್ವಭೌಮ ಸರಕಾರದ ಅಥವಾ ಸಹಕಾರೀ ಸಂಘಗಳ ಕಡೆಯಿಂದ ಸಾಗುವಳಿಗೆ ಹಿಡಿಯಲ್ಪಟ್ಟ ಹೊಲಗಳಿಗೆ ಈ ಕಾಯದೆಯು ಹತ್ತುವದಿಲ್ಲ.

ಅದೇ ಪ್ರಕಾರ ಯಾವದಾದರೊಂದು ಔದ್ಯೋಗಿಕ ಕಂಪನಿಯ ಹಿತ ಕ್ಕೋಸುಗ ಸಾಗುವಳಿಗೆ ಹಿಡಿಯಲ್ಪಟ್ಟ ಭೂಮಿ-ಸೀಮೆಗಳಿಗೆ ಈ ಕಾಯ ದೆಯು ಹತ್ತುವದಿಲ್ಲ. ಉದಾಹರಣಾರ್ಥ ಒಂದು ಸಕ್ಕರೆಯ ಕಾರಖಾನೆಯ ಸಲುವಾಗಿ ಸಾಗುವಳಿ ಮಾಡಲು ಹಿಡಿಯಲ್ಪಟ್ಟ ಹೊಲಗಳ ವಿಷಯದಲ್ಲಿ ಈ ಕಾಯದೆಯು ಹತ್ತುವದಿಲ್ಲ. ಅಂಥ ಪ್ರಸಂಗದಲ್ಲಿ ಆ ಕಂಪನಿಗೆ ೧೦ ವರ್ಷಗಳವರೆಗೇ ಲಾವಣಿಗೆ ಕೊಡಬೇಕೆಂಬ ನಿರ್ಬಂಧವಿಲ್ಲ. ಅದರಂತೆ ಅದೇ ಕಂಪನಿಯು ಸ್ವತಃ ಸಾಗುವಳಿ ಮಾಡಬೇಕು; ಬೇರೊಬ್ಬರಿಗೆ ಒಳ ಸಾಗು ಮಾಡಬಾರದೆಂದು ನಿರ್ಬಂಧವಿಲ್ಲ.

**ಲಾವಣಿಯ ಪಾವತಿ**

ಯಾವದೇ ಹೊಲದ ಬಗ್ಗೆ ರೈತನ ಕಡೆಯಿಂದ ಹೊಲದೊಡೆಯನಿಗೆ ಲಾವಣಿ ಹಣವು ಮುಟ್ಟಿದ ಬಗ್ಗೆ ಒಡೆಯನು ರೈತನಿಗೆ ಲೇಖೀ ಪಾವತಿ ಯನ್ನು ಕೊಡತಕ್ಕದ್ದು. ಇದಕ್ಕೆ ತಪ್ಪಿದರೆ ೧೦೦ ರೂ. ವರೆಗೆ ದಂಡ.

**ನಿಯಮಗಳಲ್ಲಿ ಯಾವ ವ್ಯವಸ್ಥೆಯಿರುವದು ?**

ಈ ಕಾಯದೆಯ ಉದ್ದೇಶಗಳನ್ನು ಕಾರ್ಯಕಾರಿಯಾಗಿ ಮಾಡಲಿಕ್ಕೆ ಪ್ರಾಂತಿಕ ಸರಕಾರದವರು ಕೆಲವು ನಿಯಮ ನಿಬಂಧನೆಗಳನ್ನು ಮಾಡುವರು. ಅವುಗಳಲ್ಲಿ

(ಅ) ಹೊಲದೊಡೆಯನಿಗೆ ರೈತನಿಂದ ಮುಟ್ಟತಕ್ಕ ಬೆಳೆಯ ಪಾಲನ್ನು ನಿರ್ಧರಿಸುವ ರೀತಿ.

(ಬ) ಮಾಮಲೇದಾರರ ಕಡೆಗೆ ಅಥವಾ ೧ನೇ ವರ್ಗದ ಮುನಸು ಫರ ಕಡೆಗೆ ಮಾಡತಕ್ಕ ಅರ್ಜಿ ಮತ್ತು ಅಪೀಲುಗಳ ಸ್ಟಾಂಪ ಫೀ.

(ಕ) ಸಮಂಜಸ ಲಾವಣಿಯನ್ನು ನಿರ್ಧರಿಸುವಾಗ ವಿಚಾರಿಸತಕ್ಕ ಇತರ ಅಂಶಗಳು.

(ಡ) ೧೩ನೇ ಕಲಮಿನ ಪ್ರಕಾರ ಕೊಡಬೇಕಾಗುವ ಈಡುಹಣದ ಬಗ್ಗೆ ಮಾಡತಕ್ಕ ಅರ್ಜಿಯ ನಮೂನೆ.

(ಈ) ೧೮ನೇ ಕಲಮಿನ ೩ನೇ ಉಪಕಲಮಿನ ಪ್ರಕಾರ ಕೊಡಬೇಕಾಗುವ ಸರ್ಟಿಫಿಕೇಟಿಗೆ ತಗಲುವ ಫೀ.

(ಫ) ಹೊಲದೊಡೆಯನು ಕೊಡತಕ್ಕ ಪಾವತಿಯ ನಮೂನೆ.

(ಗ) ಕಬಜಾ ಬೇಡುವ ಅರ್ಜಿಯ ನಮೂನೆ ಮತ್ತು ಚೌಕಶಿಯ ರೀತಿ.

**ಕಲೆಕ್ಟರರ ಮೇಲೆ ಪ್ರಾಂತಿಕ ಸರಕಾರದ ಅಧಿಕಾರ**

ಸಾಮಾನ್ಯವಾಗಿ ಜನರಲ್ ಮತ್ತು ರೆವ್ಹಿನ್ಯೂ ಆಡಳಿತದಲ್ಲಿ ಕಲೆಕ್ಟರರ ಮೇಲೆ ಪ್ರಾಂತಿಕ ಸರಕಾರಕ್ಕೆ ಇರುವ ಅಧಿಕಾರವೇ ಈ ಕಾಯದೆಯಲ್ಲಿಯೂ ಪ್ರಾಂತಿಕ ಸರಕಾರಕ್ಕೆ ಇರುತ್ತದೆ. ಆದರೆ ೧೨ ನೇ ಕಲಮಿನ ಪ್ರಕಾರ ನಿರ್ಣಯ ಮಾಡುವ ಸಮಂಜಸ ಲಾವಣಿಯ ವಿಷಯದಲ್ಲಿ ಮಾತ್ರ ಪ್ರಾಂತಿಕ ಸರಕಾರಕ್ಕೆ ಕೈಹಾಕಲು ಬರುವದಿಲ್ಲ. ಕಲೆಕ್ಟರ ಸಾಹೇಬರ ನಿರ್ಣಯವನ್ನು ಪರ್ಯಾಲೋಚಿಸಿ ಪರಿಶೀಲಿಸುವ ಅಧಿಕಾರವು ಪ್ರಾಂತಿಕ ಸರಕಾರಕ್ಕೆ ಇರುತ್ತದೆ.

**ಅರ್ಜಿ ಮತ್ತು ಅಪೀಲುಗಳ ಕ್ರಮ**

ಮಾಮಲೇದಾರರ ಕಡೆಗೆ ಯಾವ ಯಾವ ಪ್ರಸಂಗಗಳಲ್ಲಿ ಅರ್ಜಿಯನ್ನು ಮಾಡಲು ಬರುತ್ತದೆಯೆಂಬುದನ್ನು ನೋಡೋಣ.

೧. ಸಮಂಜಸ ಲಾವಣಿಯನ್ನು ನಿರ್ಣಯಿಸುವ ಸಲುವಾಗಿ.

೨. ಸಾಗುವಳಿದಾರತನವನ್ನು ಸುಮ್ಮಸುಮ್ಮನೆ ಹೊಲದೊಡೆಯನು ಕೊನೆಗಾಣಿಸಿದರೆ ಅದರ ಬಗ್ಗೆ ಈಡುಹಣ ಬೇಡುವದಕ್ಕೆ.

೩. ಯಾವದೇ ಹಳ್ಳಿಯಲ್ಲಿ ಹೊಲದೊಡೆಯನ ಮಾಲಕೀ ಸ್ಥಳದಲ್ಲಿ ಬಾಡಿಗೆದಾರನು ತನ್ನ ಖರ್ಚಿನಿಂದ ಮನೆಯನ್ನು ಕಟ್ಟಿಸಿಕೊಂಡು ಇರುತ್ತಿದ್ದರೆ ಅದರ ಕಬಜೆಯನ್ನು ಬೇಡುವದಕ್ಕೆ.

೪. ರೈತನು ಹಚ್ಚಿದ ಗಿಡಗಳ ಬಗ್ಗೆ ಈಡುಹಣವನ್ನು ಬೇಡಿದಾಗ ಅದನ್ನು ನಿರ್ಣಯಿಸಿ ಕೊಡಲಿಕ್ಕೆ.

೫. ಲಾವಣಿಯನ್ನು ರೈತನು ಕೊಡದಿದ್ದರೆ ಅದರ ವಸೂಲಿಯ ಸಲುವಾಗಿ.

೬. ಲಾವಣಿಯನ್ನು ರೈತನು ಕೊಡದಿದ್ದ ಮೂಲಕ ಸಾಗುವಳಿದಾರತನವನ್ನು ಕೊನೆಗಾಣಿಸುವದಕ್ಕೆ.

೭. ಹೊಲಕ್ಕೆ ಕೇಡು ಮಾಡಿದ ಕಾರಣದಿಂದ ಸಾಗುವಳಿದಾರತನವನ್ನು ಕೊನೆಗಾಣಿಸಲಿಕ್ಕೆ.

೮. ಯಾವದೇ ಹೊಲವನ್ನು ಸಾಗುಮಾಡುತ್ತಿರುವ ಮನುಷ್ಯನು ಸಾಗುವಳಿದಾರನಲ್ಲೆಂಬ ಬಗ್ಗೆ ಘೋಷಣೆಯನ್ನು ಮಾಡುವದಕ್ಕೆ.

೯. ಸಾಗುವಳಿದಾರನು ಸಂರಕ್ಷಿತರೈತನಲ್ಲೆಂದು ಘೋಷಿಸುವ ಬಗ್ಗೆ

೧೦. ಸ್ವತಃ ಸಾಗುಮಾಡಲು ಹೊಲ ಬೇಕಾದ ಬಗ್ಗೆ ಹಾಗೂ ಇನ್ನಿತರ ಇಂತಹ ಕೆಲ ಪ್ರಸಂಗಗಳಲ್ಲಿ.

ಸಮಂಜಸ ಲಾವಣಿಯನ್ನು ನಿರ್ಣಯಿಸುವ ಮಾಮಲೇದಾರರ ಅಧಿಕಾರದಿಂದ ಯಾರಿಗಾದರೂ ವ್ಯಸನವಾದರೆ ಅವರು ಮಾಮಲೇದಾರರ ನಿರ್ಣಯದ ವಿರುದ್ಧ ೧ ನೇ ವರ್ಗದ ಮುನಸುಫರ ಕಡೆಗೆ ಅಪೀಲು ಮಾಡತಕ್ಕದ್ದು. ಉಳಿದೆಲ್ಲ ವಿಷಯಗಳಲ್ಲಿ ಮಾಮಲೇದಾರರ ನಿರ್ಣಯದ ಮೇಲೆ ಕಲೆಕ್ಟರ ಸಾಹೇಬರ ಕಡೆಗೆ ಆ ನಿರ್ಣಯಗಳಾದ ೨ ತಿಂಗಳೊಳಗಾಗಿ ಅಪೀಲು ಮಾಡುವ ಹಕ್ಕು ಪಕ್ಷಕಾರರಿಗೆ ಇರುತ್ತದೆ.

**ಸಣ್ಣ ಹಿಡುವಳಿದಾರ ಕಾಯದೆ ೯ ನೇ ಕಲಮು**

ಸಣ್ಣ ಹಿಡುವಳಿದಾರರ ಪರಿಹಾರ ಕಾಯದೆಯ ( ಸ್ಮಾಲ ಹೋಲ್ಡರ್ಸ ರಿಲೀಫ ಅಕ್ಟ ) ೯ ನೇ ಕಲಮಿನ ಪ್ರಕಾರ ೧೯೩೨ ರಿಂದ ಯಾವ ರೈತನು ಸಾಗುವಳಿದಾರನೆಂದು ಒಂದು ಹೊಲದ ಕಬಜೆಯನ್ನು ಹಿಡಿದಿರುವನೋ ಅವನನ್ನು ಬಿಡಿಸಲು ಬರುವದಿಲ್ಲೆಂದು ಕಾಯದೆಯು ಇತ್ತು. ಹೊಲಸಾಗುವಳಿ ಕಾಯದೆಯನ್ನು ಸಿದ್ಧಗೊಳಿಸುವ ಉದ್ದೇಶವನ್ನು ಸರಕಾರವು ಸಾರಿದ ಕೂಡಲೆ ಆ ಕಾಯದೆಯು ತಯಾರಾಗುವದರೊಳಗಾಗಿ ಒಡೆಯರು ರೈತನನ್ನು ಬಿಡಿಸಬಹುದೆಂದು ಅಂಜಿಕೆಯು ಅನೇಕ ರೈತರಿಗೆ ಉಂಟಾಯ್ತು. ಅವರ ಈ ಅಂಜಿಕೆಯನ್ನು ನಿವಾರಿಸುವ ಸಲುವಾಗಿ ಟೆನನ್ಸಿ ಕಾಯದೆಯು ಅಮಲಿನಲ್ಲಿ ಬರುವ ಮೊದಲು ಸ್ಮಾಲ ಹೋಲ್ಡರ್ಸ ಕಾಯದೆಯಲ್ಲಿ ೯ ನೇ ಕಲಮನ್ನು ಸೇರಿಸಿ ಅದಕ್ಕೆ ಪ್ರತಿಬಂಧವನ್ನು ಮಾಡಿತು. ಈಗ ಟೆನನ್ಸಿ ಕಾಯದೆಯು ಪಾಸಾದ್ದರಿಂದ ಆ ಕಲಮಿನ ಅವಶ್ಯಕತೆಯು ಉಳಿದಿಲ್ಲ. ಆದುದರಿಂದ ಆ ಕಲಮನ್ನು ಈ ಕಾಯದೆಯು ಬಳಕೆಯಲ್ಲಿ ಬಂದಕೂಡಲೆ ರದ್ದು ಪಡಿಸಲಾಗುವದೆಂದು ಹೇಳಿದೆ.

## ಕೊನೆಯ ಮಾತು

ಇಲ್ಲಿಯ ವರೆಗೆ ಹೊಲ ಸಾಗುವಳಿಯ ಕಾಯದೆಯ ವಿವರಗಳನ್ನು ಸಾದ್ಯಂತವಾಗಿ ಕೊಟ್ಟಿದ್ದೇವೆ ಅದನ್ನೆಲ್ಲ ಲಕ್ಷಪೂರ್ವಕವಾಗಿ ಓದಿ ರೈತರೂ ಹೊಲದೊಡೆಯರೂ ತಮಗೆ ದೊರೆತಿರುವ ಪರಸ್ಪರ ಹಕ್ಕುಗಳನ್ನು ಸರಿಯಾಗಿ ಉಪಯೋಗಿಸಿದರೆ ಈ ಕಾಯದೆಯಿಂದ ಲಾಭವಾಗುವದು. ಇಲ್ಲದೆ ಹೋದರೆ ನಿರರ್ಥಕವಾದ ವ್ಯಾಜ್ಯಗಳು ಉಪಸ್ಥಿತವಾಗಿ ಕಾಯದೆಯನ್ನು ಮಾಡಿದವರ ಉದ್ದೇಶವು ವಿಪರೀತವಾಗಿ ಅನರ್ಥ ಪರಂಪರೆಗಳು ಹೆಚ್ಚಾಗುವವು.

---

